ಶ್ರೀಮನ್ನಾಲ್ವಡಿ

# ಕೃಷ್ಣರಾಜ ಒಡೆಯರವರ ಚರಿತ್ರೆ

ಎಲ್. ಸ್ವಾಮಿರಾವ್





ಶುಭವಾಗಲಿ

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು

# ಶ್ರೀಮನ್ನಾಲ್ವಡಿ
# ಕೃಷ್ಣರಾಜ ಒಡೆಯರವರ ಚರಿತ್ರೆ



ಎಲ್. ಸ್ವಾಮಿರಾವ್ ಬಿ.ಎ.,

'ಶುಭವಾಗಲಿ'



ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು- ೫೬೦೦೧೮

**SREEMANNALVADI KRISHNARAJA ODEYARAVARA CHARITRE :**
by : L. **Swami Rao**
Published by: **Kannada Sahitya Parishat**
Pampa Mahakavi Road, Chamarajapet, Bangalore - 560018
Pages : 77 +X+ photos-XXXii  Price : **50-00** ; 2003

**ಮುದ್ರಣದ ವರ್ಷ** : ೨೦೦೩
**ಪ್ರತಿಗಳು** : ೧೦೦೦
**ಬೆಲೆ ರೂ.** : ೫೦/-



**ಸುವರ್ಣ ಸ್ವಾತಂತ್ರ್ಯೋತ್ಸವ ಮಾಲಿಕೆ**

**ಕರ್ನಾಟಕ ಸರ್ಕಾರದ ಸಹಾಯಧನದಿಂದ ಪ್ರಕಟಿತ**



ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೧೮

ಶ್ರೀ ಮತ್ಕರ್ಣಾಟಕ ಸಿಂಹಾಸನಾಧೀಶ್ವರ
**ಶ್ರೀಮನ್ಮಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್,**
ಜಿ. ಸಿ. ಎಸ್. ಐ., ಜಿ. ಬಿ.ಇ.,
ಮಹಾಸ್ವಾಮಿಯವರ ದಿವ್ಯಸನ್ನಿಧಾನಂಗಳಲ್ಲಿ
ಗ್ರಂಥಕರ್ತನು
ರಾಜಭಕ್ತಿ, ವಿಶ್ವಾಸ, ವಿನಯಪೂರ್ವಕವಾಗಿ
ಮಹಾಪ್ರಭುಗಳ ಘನ ಅನುಮತಿಯನ್ನು ಪಡೆದು
ಸಮರ್ಪಿಸಿದ ಕಾಣಿಕೆ.

## ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತು ಪುಸ್ತಕ ಪ್ರಕಟಣೆ ಯೋಜನೆಯ ಅಡಿಯಲ್ಲಿ ಒಂದೇ ಬಾರಿಗೆ ನೂರು ಪುಸ್ತಕಗಳನ್ನು ಪ್ರಕಟಿಸಬೇಕೆಂಬ ಆಶಯದಿಂದ ಕರ್ನಾಟಕ ಸರ್ಕಾರಕ್ಕೆ ಯೋಜನೆಯೊಂದನ್ನು ಅಂಗೀಕಾರಕ್ಕಾಗಿ ಕೊಟ್ಟಿತ್ತು. ಪರಿಷತ್ತಿನ ಈ ಅಮೂಲ್ಯ ಪ್ರಕಟಣೆಗಳ ಮಹತ್ವವನ್ನು ಮನಗಂಡ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ ಅವರು ತುಂಬು ಅಭಿಮಾನದಿಂದ ಉದಾರ ಧನಸಹಾಯ ಮಾಡಿರುತ್ತಾರೆ. ಅವರ ಔದಾರ್ಯದ ಫಲವಾಗಿ ಈ ಪುಸ್ತಕಗಳು ಬೆಳಕು ಕಾಣುತ್ತಿರುವುದಕ್ಕೆ ನಾವು ಕೃತಜ್ಞರಾಗಿದ್ದೇವೆ.

ಕನ್ನಡ ಸಾಹಿತ್ಯದಲ್ಲಿ ಕೃಷಿ ಮಾಡಿರುವ ಅನೇಕ ಮಹನೀಯರ ಅಲಭ್ಯ ಕೃತಿಗಳೂ ಸೇರಿದಂತೆ, ಸಾಹಿತ್ಯಾಭ್ಯಾಸಿಗಳಿಗೆ ಅಗತ್ಯವಾದ ಪುಸ್ತಕಗಳನ್ನು ಈ ಯೋಜನೆಯಲ್ಲಿ ಹೊರತರುವ ಪ್ರಯತ್ನ ನಮ್ಮದು. ಕನ್ನಡ ನಾಡಿನ ಜನತೆ ಈ ಪ್ರಯತ್ನಕ್ಕೆ ಸ್ಪಂದಿಸುತ್ತಾರೆಂದು ಆಶಿಸುತ್ತೇವೆ.

ಈ ಪುಸ್ತಕವನ್ನು ಪ್ರಕಟಣೆಗಾಗಿ ಆಯ್ಕೆಮಾಡಿದ ಪ್ರಕಟಣಾ ಸಮಿತಿಯ ಸದಸ್ಯರಿಗೆ ಕೃತಜ್ಞತೆಗಳು. ಅಂದವಾಗಿ ಮುದ್ರಿಸಿರುವ ಬಿ. ಎಂ. ಶ್ರೀ ಅಚ್ಚುಕೂಟದ ನೌಕರರಿಗೆ ಅಭಿನಂದನೆಗಳು.

ಧರ್ಮದರ್ಶಿ ಹರಿಕೃಷ್ಣಪುನರೂರು
ಅಧ್ಯಕ್ಷರು

ಕಾರ್ಲ್‌ಟನ್ ಹೌಸ್
ಬೆಂಗಳೂರು

# ಮುನ್ನುಡಿ

ನಮ್ಮ ಪ್ರೀತಿಗೌರವಗಳಿಗೆ ಪಾತ್ರರಾದ ಶ್ರೀಮನ್ಮಹಾರಾಜರವರ ಜೀವನ ಚರಿತ್ರೆ ಮತ್ತು ರಾಜ್ಯಭಾರದ ವಿಚಾರವಾಗಿ ತಾವು ಬರೆದಿರುವ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯಬೇಕೆಂಬ ಶ್ರೀಮಾನ್ ಎಲ್. ಸ್ವಾಮಿರಾಯರ ಪ್ರಾರ್ಥನೆಯನ್ನು ನೆರವೇರಿಸುವ ವಿಷಯದಲ್ಲಿ ನನಗೆ ಬಹಳ ಸಂತೋಷವುಂಟಾಗಿದೆ.

ಶ್ರೀಮಾನ್ ಸ್ವಾಮಿರಾಯರು ತಮ್ಮ ಗ್ರಂಥಕ್ಕೆ ಇಂತಹ ಉತ್ತಮ ವಿಷಯವನ್ನು ಆರಿಸಿಕೊಂಡಿರುವುದಕ್ಕಾಗಿ ನಾನು ಅವರನ್ನು ಅಭಿನಂದಿಸುತ್ತೇನೆ. ಶ್ರೀಮನ್ಮಹಾರಾಜರವರ ಸದ್ಗುಣಗಳ ಪ್ರಭಾವದಿಂದ ಪ್ರಜೆಗಳೆಲ್ಲರಿಗೂ ಅವರಲ್ಲಿ ಪರಮ ಭಕ್ತಿ ವಿಶ್ವಾಸಗಳುಂಟಾಗಿವೆ. ಕರ್ಣಾಟಕ ಸಂಸ್ಕೃತಿ ಮತ್ತು ಸಂಪ್ರದಾಯಗಳಲ್ಲಿ ಉತ್ತಮೋತ್ತಮವಾದುವುಗಳೆಲ್ಲ ಮೂರ್ತೀಭವಿಸಿದಂತೆ ಮಹಾಸ್ವಾಮಿಯವರು ಶೋಭಿಸುತ್ತಿದ್ದಾರೆಂಬುದು ಪ್ರಜೆಗಳ ಭಾವನೆ.

ಶ್ರೀಮಾನ್ ಸ್ವಾಮಿರಾಯರ ಪುಸ್ತಕದಲ್ಲಿ ಶ್ರೀಮನ್ಮಹಾರಾಜರವರ ಜೀವನ ಚರಿತ್ರವೂ ರಾಜ್ಯಭಾರ ವಿಚಾರವೂ ಸುಗ್ರಥಿತವಾಗಿಯೂ ಸ್ವಾರಸ್ಯವಾಗಿಯೂ ವರ್ಣಿತವಾಗಿರುವುದಲ್ಲದೆ, ಅವರ ಆಳ್ವಿಕೆಯ ೩೫ ವರ್ಷಗಳಲ್ಲಿ ದೇಶದ ಪ್ರಗತಿ ಮತ್ತು ಅಭಿವೃದ್ಧಿಗಳ ವಿಷಯವಾಗಿ ಆಗಾಗ ನಡೆದಿರುವ ಏರ್ಪಾಡುಗಳಿಗೆ ಸಂಬಂಧಪಟ್ಟ ಅನೇಕ ಉಪಯುಕ್ತ ವಿಷಯಗಳೂ ಸಹ ಗರ್ಭೀಕೃತವಾಗಿರುವುವು.

ಶ್ರೀಮಾನ್ ಸ್ವಾಮಿರಾಯರ ಪುಸ್ತಕವನ್ನು ಮೈಸೂರು ಸಂಸ್ಥಾನದಲ್ಲಿ ಪ್ರೀತಿಯುಳ್ಳ ಸಮಸ್ತರೂ ಓದಬೇಕೆಂದು ನಾನು ಸಂತೋಷದಿಂದ ಸೂಚಿಸುವೆನು, ಅವರಿಗೆ ಸ್ವಾರಸ್ಯಕರವಾಗಿ ತೋರಿ ಸಂತೋಷವನ್ನುಂಟುಮಾಡುವ ಅನೇಕ ಸಂಗತಿಗಳು ಈ ಗ್ರಂಥದಲ್ಲಿವೆಯೆಂಬುದು ನನ್ನ ನಂಬಿಕೆ.

ಮಿರ್ಜಾ ಎಂ. ಇಸ್ಮಾಯಿಲ್,
ಮೈಸೂರು ಸಂಸ್ಥಾನದ ದಿವಾನ್‌ರವರು

CARLTON HOUSE
BANGALORE

# FOREWORD

It has given me very great pleasure to accede to the request of Mr. L. Swami Rao to write foreword to his book on the life and reign of His Highness the Maharaja, our great and beloved Ruler.

I congratulate Mr. Swami Rao on the choice of his theme. His Highness's personality is one which evokes warm and affectionate reverence in his subjects who regard him as the embodiment of all that is best in the culture and traditions of Karanataka.

Mr. Swami Rao's book, besides giving an interesting and connected account of His Highness's life and career, contains much useful information relating to the measures adopted from time to time for the progress and development of the State during the past thirty five years of his reign.

I have great pleasure in commending Mr. Swami Rao's book to all lovers of Mysore and trust that they may find in it much to interest and delight them.

MIRZA M. ISMAIL
DEWAN OF MYSORE

# ಪೀಠಿಕೆ

ಮೈಸೂರು ಸಂಸ್ಥಾನವು ಮಾದರಿಯ ಸಂಸ್ಥಾನವೆಂದು ಭಾರತವರ್ಷದಲ್ಲಿ ಮಾತ್ರವಲ್ಲದೆ ಈ ಜಗತ್ತಿನಲ್ಲಿಯೇ ಪ್ರಶಂಸೆಯನ್ನು ಪಡೆದಿದೆ. ಇಂತಹ ಸಂಸ್ಥಾನದ ಪ್ರಭುವರ್ಯರಾದ ಶ್ರೀಮತ್ಕರ್ಣಾಟಕ ಸಿಂಹಾಸನಾಧೀಶ್ವರ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಆದರ್ಶಜೀವನ ಚರಿತ್ರೆಯನ್ನು ಬರೆದು, ಅವರ ಚರಣಾರವಿಂದಗಳಲ್ಲಿ ಸಮರ್ಪಿಸುವುದು ಕೇವಲ ಪವಿತ್ರ ಕಾರ್ಯವೆಂದು ಇದನ್ನು ಕೈಕೊಂಡಿದ್ದೇನೆ. ಪ್ರಭುಸೇವೆಯನ್ನೂ ಭಾಷಾ ಸೇವೆಯನ್ನೂ ಮಾಡಬೇಕೆಂಬ ಉತ್ಸಾಹಭರಿತನಾಗಿ ಈ ಕಾರ್ಯದಲ್ಲಿ ತೊಡಗಿರುವ ನನ್ನ ಉದ್ದೇಶವನ್ನು ರಾಷ್ಟ್ರಾಭಿಮಾನಿಗಳೂ, ಭಾಷಾಭಿಮಾನಿಗಳೂ ಆದ ಕನ್ನಡಿಗರು ಗಮನದಲ್ಲಿಟ್ಟು ಪ್ರೋತ್ಸಾಹಿಸುವರೆಂದು ನಂಬಿರುತ್ತೇನೆ.

ನಮ್ಮ ಮಹಾಸ್ವಾಮಿಯವರು ಈ ಪುಸ್ತಕದ ಮುದ್ರಣಕ್ಕಾಗಿ ದ್ರವ್ಯ ಸಹಾಯ ಮಾಡಿಸಿದುದಲ್ಲದೆ. ಇದನ್ನು ತಮಗೆ ಸಮರ್ಪಿಸಲು ಒಪ್ಪಿಗೆಯನ್ನು ದಯೆಪಾಲಿಸಿದುದಕ್ಕಾಗಿ ನಿರಂತರವೂ ಮಹಾಪ್ರಭುಗಳವರಿಗೆ ಭಕ್ತಿಯುತ ವಂದನೆಗಳನ್ನು ಸಮರ್ಪಿಸುವೆನು.

ಇದಕ್ಕೆ ಬೇಕಾದ ಅನೇಕ ಪಡಿಯಚ್ಚುಗಳನ್ನು ಸರಕಾರಿ ಮುದ್ರಣಾಲಯದಿಂದ ಕೊಡಿಸಿಕೊಟ್ಟು, ಈ ಗ್ರಂಥಕ್ಕೆ ತಮ್ಮ ಅಮೋಘವಾದ ಮುನ್ನುಡಿಯನ್ನು ದಯೆಪಾಲಿಸಿ, ನನಗೆ ವಿಶೇಷ ಪ್ರೋತ್ಸಾಹಕೊಟ್ಟು ಉಪಕರಿಸಿದ ಮೈಸೂರು ಸಂಸ್ಥಾನದ ದಿವಾನ್‌ಸಾಹೇಬರವರಾದ ಅಮೀನ್ ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಟಿ.,ಕೆ.ಸಿ.ಐ.ಇ., ಓ. ಬಿ. ಇ., ಅವರಿಗೆ ನಾನು ಚಿರಋಣಿಯಾಗಿದ್ದೇನೆ.

ಈ ಪುಸ್ತಕವು ಅಚ್ಚಾಗುವುದಕ್ಕೆ ಬೇಕಾದ ಸಹಾಯವನ್ನೆಲ್ಲ ಮನಃ ಪೂರ್ವಕವಾಗಿ ಮಾಡಿದ ಶ್ರೀಮನ್ಮಹಾರಾಜರವರ ಹುಜೂರು ಸೆಕ್ರೆಟೆರಿಯವರಾದ ರಾಜಸಭಾಭೂಷಣ ಶ್ರೀಯುತ ಟಿ. ತಂಬೂಚೆಟ್ಟಿಯವರಿಗೆ ನನ್ನ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.

ಈ ಗ್ರಂಥದ ಹಸ್ತಪ್ರತಿಯು ಸಿದ್ಧವಾದಕೂಡಲೆ, ನನ್ನ ಬಿನ್ನಹವನ್ನು ಲಾಲಿಸಿ, ಪುಸ್ತಕವನ್ನು ಅಮೂಲಾಗ್ರವಾಗಿ ಓದಿನೋಡಿ, ಕೆಲವು ತಿದ್ದುಪಡಿಗಳನ್ನು ಮಾಡಿ, ತಮ್ಮ ಸದಭಿಪ್ರಾಯದಿಂದ ಗೌರವಿಸಿ, ನನಗೆ ಬಹಳವಾಗಿ ಉತ್ತೇಜನಕೊಟ್ಟ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ.,ಬಿ.ಎಲ್.,ಅವರಿಗೆ ನನ್ನ ಮನಃಪೂರ್ವಕವಾದ ವಂದನೆಗಳನ್ನರ್ಪಿಸುತ್ತೇನೆ.

ಈ ಪುಸ್ತಕವನ್ನು ಬರೆಯುವುದಲ್ಲಿ ನನಗೆ ಸರಕಾರಿ ಪ್ರಕಟನೆಗಳಲ್ಲದೆ, ಅನೇಕ ಇಂಗ್ಲಿಷ್ ಮತ್ತು ಕನ್ನಡ ಪುಸ್ತಕಗಳೂ, ವೃತ್ತ ಪತ್ರಿಕೆಗಳೂ ಬಲುಮಟ್ಟಿಗೆ ಸಹಾಯಮಾಡಿವೆ. ಇದಕ್ಕಾಗಿ ನಾನು ಸಂಬಂಧಪಟ್ಟ ಅಧಿಕಾರಿಗಳಿಗೂ, ಪುಸ್ತಕಗಳ ಗ್ರಂಥಕರ್ತರುಗಳಿಗೂ, ವೃತ್ತಪತ್ರಿಕೆಗಳ ಸಂಪಾದಕರುಗಳಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ. ಕಡೆಯದಾಗಿ ಈ ಗ್ರಂಥದ ಅಂದವನ್ನು ಹೆಚ್ಚಿಸುವುದಕ್ಕಾಗಿ, ಅರಮನೆಯಿಂದಲೂ ಸರಕಾರಿ ಮುದ್ರಣಾಲಯದಿಂದಲೂ ದೊರೆತ ಪಡಿಯಚ್ಚುಗಳಲ್ಲದೆ, ಮಿಕ್ಕ ಕೆಲವು ಪಡಿಯಚ್ಚುಗಳನ್ನು ಎರವಲಾಗಿ ಕೊಟ್ಟು ಸಹಾಯಮಾಡಿದ ನನ್ನ ಮಿತ್ರರಾದ ಇತರ ಮಹನೀಯರಿಗೂ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು ನಗರ

ಇತಿ
ಎಲ್.ಸ್ವಾಮಿರಾವ್
ಗ್ರಂಥಕರ್ತ

# ಅನುಕ್ರಮಣಿಕೆ

## ಚಿತ್ರಗಳು

# ಶ್ರೀ ಮತ್ಕರ್ಣಾಟಕ ಸಿಂಹಾಸನಾಧೀಶ್ವರ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಚರಿತ್ರೆ

## ೧. ಪೀಠಿಕಾ ಪ್ರಕರಣ

ಮೈಸೂರು ದೇಶವು ದಕ್ಷಿಣ ಇಂಡಿಯದಲ್ಲಿರುವ ಆಶ್ರಿತಸಂಸ್ಥಾನಗಳಲ್ಲಿ ಒಂದಾಗಿದೆ. ಇದು ಪೂರ್ವಪಶ್ಚಿಮ ಘಟ್ಟಗಳ ನಡುವೆ ಆಕಾರದಲ್ಲಿ ಸ್ವಲ್ಪ ಹೆಚ್ಚುಕಡಿಮೆ ತ್ರಿಕೋಣದಂತಿರುವುದು. ಈ ದೇಶದ ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಸ್ವಲ್ಪಭಾಗ ವಿನಾ ಉಳಿದ ಎಲ್ಲಾ ಕಡೆಯಲ್ಲಿಯೂ ಮದರಾಸು ಪ್ರಾಂತವು ಬಳಸಿಕೊಂಡಿದೆ.

ಮೈಸೂರು ಸಂಸ್ಥಾನವು ಉತ್ತರದಕ್ಷಿಣ ಸುಮಾರು ೨೩೦ ಮೈಲಿಗಳೂ, ಪೂರ್ವಪಶ್ಚಿಮ ಸುಮಾರು ೨೯೦ ಮೈಲಿಗಳೂ ವಿಸ್ತಾರವುಳ್ಳದಾಗಿದೆ. ಇದರ ವಿಸ್ತೀರ್ಣ ೨೯,೪೭೩ ಚದರ ಮೈಲಿಗಳು. ೧೯೩೧ರಲ್ಲಿ ನಡೆದ ಪ್ರಜಾಗಣತಿಯ ಪ್ರಕಾರ ಈ ಸಂಸ್ಥಾನದಲ್ಲಿ ಅರವತ್ತೈದು ಲಕ್ಷ ಜನಗಳಿದ್ದಾರೆ. ಈ ದೇಶದ ಹುಟ್ಟುವಳಿ ಮೂರುಕೋಟಿ ಎಪ್ಪತ್ತೆಂಟುಲಕ್ಷ ರೂಪಾಯಿಗಳು.

ಇಂಡಿಯ ದೇಶದ ಸಂಸ್ಥಾನಗಳಲ್ಲೆಲ್ಲಾ ಮೈಸೂರು ಸಂಸ್ಥಾನವು ವಿಸ್ತೀರ್ಣದಲ್ಲಿ ಮೂರನೆಯದಾಗಿಯೂ, ಜನಸಂಖ್ಯೆಯಲ್ಲಿ ಎರಡನೆಯದಾಗಿಯೂ ಇದೆ. ರಾಜ್ಯದಾಡಳಿತದ ಸೌಕರ್ಯಕ್ಕಾಗಿ ಇದನ್ನು, ಕೋಲಾರ, ಬೆಂಗಳೂರು, ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಕಡೂರು, ಹಾಸನ, ಮೈಸೂರು ಎಂದು ಎಂಟು ಡಿಸ್ಟ್ರಿಕ್ಟುಗಳಾಗಿ ವಿಭಾಗಿಸಿದ್ದಾರೆ.

ಮೈಸೂರು ದೇಶದ ಪಶ್ಚಿಮ ಭಾಗವನ್ನು ಬೆಟ್ಟಸೀಮೆ ಅಥವಾ ಮಲೆನಾಡೆಂತಲೂ, ಉತ್ತರ ಪೂರ್ವ ಭಾಗಗಳನ್ನು ಬಯಲುಸೀಮೆ ಅಥವಾ ಮೈದಾನಪ್ರದೇಶವೆಂತಲೂ ಸಾಮಾನ್ಯವಾಗಿ ಕರೆಯಬಹುದು. ಶಿವಮೊಗ್ಗ, ಕಡೂರು, ಹಾಸನ ಡಿಸ್ಟ್ರಿಕ್ಟುಗಳಿಗೆ ಮಲೆನಾಡು ಡಿಸ್ಟ್ರಿಕ್ಟುಗಳೆಂಬ ಹೆಸರು ರೂಢಿಯಾಗಿದೆ.

ಈ ಮಲೆನಾಡು ಡಿಸ್ಟ್ರಿಕ್ಟುಗಳಲ್ಲಿ ಪಶ್ಚಿಮಘಟ್ಟಗಳು ಹಬ್ಬಿವೆ. ಈ ಘಟ್ಟಗಳ ತಪ್ಪಲುಗಳಲ್ಲಿರುವ ಪ್ರಾಂತವೇ ನಮ್ಮ ದೇಶದಲ್ಲಿ ಅತಿ ಫಲವತ್ತಾದ ಪ್ರದೇಶ. ಇಲ್ಲಿ ಮಳೆಬೀಳುವುದು ಹೆಚ್ಚು, ಆರೋಗ್ಯ ಕಡಿಮೆ. ಮೈದಾನ ಪ್ರದೇಶದಲ್ಲಿ ಮಳೆ ಕಡಿಮೆ, ಆದರೆ ಆರೋಗ್ಯ ಹೆಚ್ಚು. ಈ ಸಂಸ್ಥಾನದಲ್ಲಿ ಹೆಚ್ಚು ಜನರು ವ್ಯವಸಾಯದಿಂದ ಜೀವಿಸುತ್ತಾರೆ.

ಮೈಸೂರು ದೇಶವು ಸಾಮಾನ್ಯವಾಗಿ ಸಮುದ್ರಮಟ್ಟಕ್ಕಿಂತ ಎರಡು ಮೂರು ಸಾವಿರ ಅಡಿಗಳಷ್ಟು ಎತ್ತರವಾಗಿದೆ. ಈ ದೇಶದ ವಾಯುಗುಣವು ಒಟ್ಟಿನಲ್ಲಿ ಯಾವಾಗಲೂ ಹಿತಕರವಾಗಿರುತ್ತದೆ. ಅದರಲ್ಲಿಯೂ ಬೆಂಗಳೂರು ನಗರ ಮತ್ತು ಡಿಸ್ಟ್ರಿಕ್ಟು ಎತ್ತರ

ವಾದ ಮೈದಾನಪ್ರದೇಶದಲ್ಲಿರುವುದರಿಂದ ಇಲ್ಲಿಯ ಹವವು ತಂಪಾಗಿಯೂ ಆರೋಗ್ಯಕರವಾಗಿಯೂ ಇದೆ.

ಈಗ ನಮ್ಮನ್ನಾಳುತ್ತಿರುವ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರು ಶ್ರೀ ಚಾಮರಾಜೇಂದ್ರ ಒಡೆಯರವರ ಮಕ್ಕಳು. ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ನಾಲ್ಕುಮಂದಿ ಗಂಡುಮಕ್ಕಳೂ, ಮೂವರು ಹೆಣ್ಣುಮಕ್ಕಳೂ ಜನಿಸಿದರು. ಗಂಡುಮಕ್ಕಳಲ್ಲಿ ಹಿರಿಯವರೇ ನಮ್ಮ ಮಹಾರಾಜರವರು. ಇವರ ತಮ್ಮಂದಿರ ಹೆಸರು ಶ್ರೀ ಕಂಠೀರವ ನರಸಿಂಹ ರಾಜ ಒಡೆಯರವರು. ಇವರೇ ನಮ್ಮ ಯುವರಾಜರು.

ಆಳುವ ಮಹಾಸ್ವಾಮಿಯವರು ಈ ದೇಶದ ರಾಜಧಾನಿಯಾದ ಮೈಸೂರಿನಲ್ಲಿ ವಾಸಮಾಡುತ್ತಾರೆ. ಇಲ್ಲಿ ಹೊಸದಾಗಿ ಕಟ್ಟಿರುವ ಅತ್ಯುತ್ಕೃಷ್ಟವಾದ ಅರಮನೆ ಇದೆ. ಈ ಪಟ್ಟಣದ ಸಮೀಪದಲ್ಲಿರುವ ಚಾಮುಂಡಿ ಬೆಟ್ಟದಮೇಲೆ ಮೈಸೂರು ದೊರೆಗಳ ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿ ಅಮ್ಮನವರ ದೇವಸ್ಥಾನವಿರುವುದು.

## ೨. ಮೈಸೂರಿನ ಪೂರ್ವಚರಿತ್ರ ಸಂಗ್ರಹ

ಆಳುವ ಮಹಾಸ್ವಾಮಿಯವರು ಯದುಕುಲದಲ್ಲಿ ಹುಟ್ಟಿದವರು. ಇವರ ಮೂಲ ಪುರುಷರು ಯದುರಾಯರು. ಈ ಯದುರಾಯರು, ಉತ್ತರ ಹಿಂದುಸ್ಥಾನದಲ್ಲಿರುವ ಗುಜರಾತು ಪ್ರಾಂತದಿಂದ ಇವರ ತಮ್ಮಂದಿರಾದ ಕೃಷ್ಣರಾಯರೊಂದಿಗೆ, ಸುಮಾರು ಆರು ನೂರು ವರ್ಷಗಳ ಹಿಂದೆ (ಹದಿನಾಲ್ಕನೆಯ ಶತಮಾನದ ಕಡೆಯಲ್ಲಿ) ಯಾತ್ರಾರ್ಥಿಗಳಾಗಿ ಮೈಸೂರಿಗೆ ಬಂದರು. ಇವರು ದ್ವಾರಕಾ ನಗರದ ಅರಸಾದ ರಾಜದೇವನ ಮಕ್ಕಳು.

ಯದುರಾಯರು ಮೈಸೂರಿಗೆ ಬಂದ ಕಾಲದಲ್ಲಿ ಇಲ್ಲಿಗೆ ಸಮೀಪದಲ್ಲಿರುವ ಹದಿನಾಡನ್ನು ಆಳುತ್ತಿದ್ದ ಚಾಮರಾಜರು ಕಾಲವಾಗಿದ್ದರು. ಇವರಿಗೆ ಗಂಡು ಮಕ್ಕಳಿರಲಿಲ್ಲ. ಈ ಸಮಯದಲ್ಲಿ ಸೇನಾಧಿಪತಿಯಾಗಿದ್ದ ಮಾರನಾಯಕನು ಚಾಮರಾಜರ ಮಗಳಾದ ದೇವಾಜಮ್ಮಣ್ಣಿಯವರನ್ನು ಮದುವೆಯಾಗಿ ತಾನೇ ರಾಜ್ಯವನ್ನು ಆಕ್ರಮಿಸಬೇಕೆಂದು ಪ್ರಯತ್ನ ಪಟ್ಟನು.

ಚಾಮರಾಜರ ಹೆಂಡತಿಗೆ ಏನೂ ತೋರಲಿಲ್ಲ. ಅವರಿಗೆ ತಕ್ಕ ಸಹಾಯ ಸಂಪತ್ತುಗಳಿಲ್ಲದುದರಿಂದ ಮಗಳನ್ನು ತೊರೆಯನಾದ ಮಾರನಾಯಕನಿಗೇ ಮದುವೆಮಾಡಿಕೊಡಲು ಒಪ್ಪಬೇಕಾಗಿ ಬಂತು. ಇಂತಹ ಸಮಯದಲ್ಲಿ ಯದುರಾಯರು ಇದನ್ನೆಲ್ಲಾ ಒಬ್ಬ ಜಂಗಮರೊಡೆಯನ ಸಹಾಯದಿಂದ ಅರಿತು, ಮದುವೆಯ ಸಂಭ್ರಮದಲ್ಲಿ ಮೈಮರೆತಿದ್ದ ಮಾರನಾಯಕನನ್ನು ಉಪಾಯದಿಂದ ಕೊಂದರು.

ಅನಂತರ ಯದುರಾಯರಿಗೆ ದೇವಾಜಮ್ಮಣ್ಣಿಯವರನ್ನು ಕೊಟ್ಟು ಮದುವೆಯಾಯಿತು. ರಾಜ್ಯಕ್ಕೂ ಅವರೇ ಒಡೆಯರಾದರು. ಇದಕ್ಕೆಲ್ಲಾ ತಮಗೆ ಸಹಾಯಮಾಡಿದ ಜಂಗಮರೊಡೆಯನ ಇಷ್ಟದಂತೆ, 'ಒಡೆಯರು' ಎಂಬ ಬಿರುದನ್ನು ಯದುರಾಯರು ತಮ್ಮ ಹೆಸರಿನ ಮುಂದೆ ಸೇರಿಸಿಕೊಂಡರು. ಅಂದಿನಿಂದ ಈ ಬಿರುದು ಮೈಸೂರು ಅರಸರಿಗೆ ಪಾರಂಪರ್ಯವಾಗಿ ಬಂದಿದೆ.

ಯದುರಾಯರು ಈ ದೇಶಕ್ಕೆ ಬಂದಾಗ ಮೈಸೂರು ರಾಜ್ಯವು ಈಗಿನಷ್ಟು ದೊಡ್ಡದಾಗಿರಲಿಲ್ಲ. ಈ ಪ್ರಾಂತದಲ್ಲಿ ಸಣ್ಣಪುಟ್ಟ ನಾಡುಗಳು ಅನೇಕವಾಗಿದ್ದವು. ಇಂತಹ ನಾಡುಗಳಿಗೆ ಪಾಳೆಯಗಾರರು ಯಜಮಾನರಾಗಿದ್ದರು.

ಯದುರಾಯರ ಅನಂತರ ಆಳಿದ ಅರಸರಲ್ಲಿ ರಾಜಒಡೆಯರು, ಕಂಠೀರವ ನರಸರಾಜ ಒಡೆಯರು, ದೊಡ್ಡ ದೇವರಾಜಒಡೆಯರು, ಚಿಕ್ಕ ದೇವರಾಜ ಒಡೆಯರು ಪ್ರಸಿದ್ಧರು. ರಾಜಒಡೆಯರು ವಿಜಯನಗರದ ರಾಯಭಾರಿಯ ವಶದಲ್ಲಿದ್ದ ಶ್ರೀರಂಗಪಟ್ಟಣವನ್ನು ಗೆದ್ದುಕೊಂಡರು. ಮೈಸೂರು ದೇಶವು ಆ ಕಾಲದಿಂದ ಸ್ವತಂತ್ರವಾದುದಲ್ಲದೆ ಕ್ರಮ ಕ್ರಮವಾಗಿ ಅಭಿವೃದ್ಧಿ ಹೊಂದಿ ವಿಸ್ತಾರವಾಯಿತು. ಆಗಿನಿಂದ ಇನ್ನೂರು ವರ್ಷಗಳ ಕಾಲ ಶ್ರೀರಂಗಪಟ್ಟಣವು ಮೈಸೂರು ದೇಶಕ್ಕೆ ರಾಜಧಾನಿಯಾಗಿತ್ತು.

ಚಿಕ್ಕದೇವರಾಜ ಒಡೆಯರ ಅನಂತರ ಪಟ್ಟಕ್ಕೆ ಬಂದ ಅರಸರು ಸಮರ್ಥರಾಗಿರಲಿಲ್ಲ. ಇದರಿಂದ ರಾಜ್ಯಾಧಿಕಾರವು ದಳವಾಯಿಗಳ ಕೈಸೇರಿ, ಕಡೆಗೆ ಸೈನ್ಯದಲ್ಲಿ ಚಾಕರನಾಗಿದ್ದ ಹೈದರಾಲಿಯು ರಾಜ್ಯಭಾರಮಾಡಲು ಅವಕಾಶವಾಯಿತು. ಹೈದರಾಲಿಯೂ ಅವನ ಮಗನಾದ ಟೀಪ್ಪುಸುಲ್ತಾನನೂ ಮೈಸೂರು ದೇಶವನ್ನು ಮೂವತ್ತೆಂಟು ವರ್ಷಗಳ ಕಾಲ ಆಳಿದರು.

ಟೀಪ್ಪು ಇಂಗ್ಲಿಷರ ಮೇಲೆ ಯುದ್ಧಮಾಡಿ ೧೭೯೯ರಲ್ಲಿ ಶ್ರೀರಂಗಪಟ್ಟಣದ ಬಳಿ ಮಡಿದನು. ಇಂಗ್ಲಿಷರು ಮೈಸೂರು ದೇಶವನ್ನು ಸ್ವಾಧೀನ ಪಡಿಸಿಕೊಂಡು, ಅದನ್ನು ನಾಲ್ಕು ಭಾಗಮಾಡಿ, ತಾವೂ, ನಿಜಾಮನೂ, ಮರಾಟೆಯವರೂ ಒಂದೊಂದು ಭಾಗವನ್ನು ಹಂಚಿಕೊಂಡು, ಉಳಿದ ಈಗಿನ ಮೈಸೂರು ರಾಜ್ಯವನ್ನು, ಏಕಾಂತದಲ್ಲಿ ತಮಗೆ ಸಹಾಯ ಮಾಡಿದ್ದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಪೋಷಣೆಯಲ್ಲಿದ್ದ ನಿಜವಾದ ಹಕ್ಕುದಾರರಾದ ಯದುವಂಶದ ಅರಸರಿಗೆ ಕೊಟ್ಟರು. ಈ ಏರ್ಪಾಡಿನಿಂದ ಮೈಸೂರು ರಾಜಮನೆತನದವರು ಪುನಃ ರಾಜ್ಯಭಾರ ಮಾಡುವುದಕ್ಕೆ ಅವಕಾಶವಾಗಿ, ಈ ನಮ್ಮ ಮಹಾರಾಜರವರ ತಾತಂದಿರಾದ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರಿಗೆ ದೊರೆತನವಾಯಿತು.

ಹೀಗೆ ಮೈಸೂರು ದೇಶವು ರಾಜರ ಮನೆತನಕ್ಕೆ ಬಂದಾಗ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ಐದು ವರ್ಷ ಮಾತ್ರ ವಯಸ್ಸು. ಅವರು ತಮಗೆ ಹದಿನಾರು ವರ್ಷವಾಗುತ್ತಲೇ ಎಂದರೆ, ೧೮೧೧ರಲ್ಲಿ ರಾಜ್ಯಭಾರವನ್ನು ತಾವೇ ವಹಿಸಿಕೊಂಡು ಕೆಲವು ದಿನಗಳು ಸಮರ್ಪಕವಾಗಿ ಆಳಿದರು. ಕಡೆಗೆ ರಾಜ್ಯದಲ್ಲಿ ಗಲಭೆಯುಂಟಾಗಿ ಎಲ್ಲೆಲ್ಲಿಯೂ ಬಿಗಿತಪ್ಪಿತು. ರಾಜರಿಗೆ ಏನೂ ತೋರದೆ, ಅವರು ೧೮೩೧ರಲ್ಲಿ ರಾಜ್ಯಭಾರವನ್ನು ಇಂಗ್ಲಿಷ್ ಕಮಿಷನರ ಆಡಳಿತಕ್ಕೆ ಬಿಟ್ಟರು. ಅಂದಿನಿಂದ ಮೈಸೂರು ಸಂಸ್ಥಾನದಲ್ಲಿ ಚೀಫ್ ಕಮಿಷನರ ಅಧಿಕಾರವು ಪ್ರಾರಂಭವಾಯಿತು.

ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರಿಗೆ ಮಕ್ಕಳಿರಲಿಲ್ಲ. ಇವರು, ತಮ್ಮ ಜ್ಞಾತಿಗಳಾದ ಚಿಕ್ಕ ಕೃಷ್ಣೆ ಅರಸರು ಮತ್ತು ಇವರ ಧರ್ಮಪತ್ನಿ ದೇವರಾಜಮ್ಮಣ್ಣಿಯವರ ಮೂರನೆಯ ಮಗುವಾದ ಚಾಮರಾಜ ಅರಸರನ್ನು ೧೮೬೫ರಲ್ಲಿ ಶಾಸ್ತ್ರೋಕ್ತ ಪ್ರಕಾರವಾಗಿ ದತ್ತುಮಾಡಿಕೊಂಡರು. ಆಗ್ಗೆ ಚಾಮರಾಜ ಅರಸರಿಗೆ ಇನ್ನೂ ಎರಡೂವರೆ ವರ್ಷ ವಯಸ್ಸು. ಈ ದತ್ತುಪುತ್ರ ಸ್ವೀಕಾರವನ್ನು ಸಾರ್ವಭೌಮ ಸರಕಾರದವರು ೧೮೬೭ರಲ್ಲಿ ಒಪ್ಪಿಕೊಂಡರು. ಈ ಚಾಮರಾಜ ಒಡೆಯರವರೇ ಈಗ ನಮ್ಮನ್ನಾಳುವ ಮಹಾಸ್ವಾಮಿಯವರ ತಂದೆಯವರು.

ಮುಮ್ಮಡಿ ಕೃಷ್ಣರಾಜ ಒಡೆಯರವರು ೧೮೬೮ರಲ್ಲಿ ತಮ್ಮ ೭೫ನೆಯ ವಯಸ್ಸಿನಲ್ಲಿ ಕಾಲವಾದರು. ಚೀಫ್ ಕಮೀಷನರುಗಳ ಅಧಿಕಾರವು ಮೈಸೂರಿನಲ್ಲಿ (೧೮೩೧-೧೮೮೧) ಐವತ್ತು ವರ್ಷಗಳ ಕಾಲ ನಡೆಯಿತು. ಈ ಕಾಲದಲ್ಲಿ ಕ್ರಮಕ್ಕೆ ಬಂದಿದ್ದ ಮೈಸೂರು ರಾಜ್ಯವನ್ನು ಇಂಗ್ಲಿಷರು ೧೮೮೧ನೆಯ ಮಾರ್ಚಿ ೨೫ನೆಯ ತಾರೀಖಿನ ದಿನ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಒಪ್ಪಿಸಿದರು.

ಶ್ರೀ ಚಾಮರಾಜೇಂಪ್ರ ಒಡೆಯರವರು ಹದಿಮೂರು ವರ್ಷಗಳ ಕಾಲ ಬಲು ವಿಚಕ್ಷಣೆಯಿಂಧ ರಾಜ್ಯವನ್ನಾಳಿ, ಮೈಸೂರು ದೇಶವನ್ನು ಮಾದರಿಯ ಸಂಸ್ಥಾನವನ್ನಾಗಿ ಮಾಡಿದರು. ಇವರು ೧೮೯೪ರಲ್ಲಿ ಕಲ್ಕತ್ತೆಗೆ ಹೋಗಿದ್ದಾಗ, ರೋಗಗ್ರಸ್ತರಾಗಿ ಅಲ್ಲಿಯೇ ಕಾಲವಾದರು. ಇವರಿಗೆ ಮರಣ ಕಾಲದಲ್ಲಿ ಇನ್ನೂ ೩೨ ವರ್ಷ ಮಾತ್ರ ವಯಸ್ಸು. ಪ್ರಜಾವತ್ಸಲರಾದ ಇವರು ಲೋಕಾಂತರವನ್ನೈದಿದ ಶೋಕವಾರ್ತೆ ದೇಶದಲ್ಲೆಲ್ಲ ಹರಡಿ, ಮೈಸೂರಿನವರು ಮಾತ್ರವಲ್ಲದೆ ಈ ಭರತಖಂಡದವರೆಲ್ಲರೂ ಬಹಳವಾಗಿ ವ್ಯಸನಪಟ್ಟರು. ಆಳುವ ಮಹಾಸ್ವಾಮಿಯವರು ಇವರ ಜ್ಞಾಪಕಾರ್ಥವಾಗಿ, ಕಲ್ಕತ್ತೆಯಲ್ಲಿ ಒಂದು ಬೃಂದಾವನವನ್ನೂ, ಧರ್ಮಶಾಲೆಯನ್ನೂ ಕಟ್ಟಿಸಿ, ಮೈಸೂರಿನಲ್ಲಿ ಶ್ರೀಚಾಮರಾಜೇಂದ್ರ ಒಡೆಯರವರ ಶಿಲಾಪ್ರತಿಮೆಯನ್ನೂ, ಟೆಕ್ನಿಕಲ್ ಇನ್‌ಸ್ಟಿಟ್ಯೂಟ್ ಎಂಬ ಕಲಾಶಾಲೆಯನ್ನೂ ಸ್ಥಾಪಿಸಿರುವರು.

ಶ್ರೀ ಚಾಮರಾಜೇಂದ್ರ ಒಡೆಯರಂತಹ ನಿಗರ್ವಿಗಳೂ, ಅಹಂಭಾವ ರಹಿತರೂ, ನ್ಯಾಯಶೀಲರೂ, ವಿನೋದಪುರುಷರೂ, ಗುಣವಂತರೂ ಅತಿ ವಿರಳ. ಇವರ ಆಸ್ಥಾನವು ಸದಾ ಕವಿಗಳಿಂದಲೂ, ಪಂಡಿತೋತ್ತಮರಿಂದಲೂ ಶೋಭಿಸುತ್ತಿತ್ತು. ಇವರ ಕಾಲದಲ್ಲಿ ಸ್ತ್ರೀವಿದ್ಯಾಭ್ಯಾಸಕ್ಕೂ, ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಪುನರುಜ್ಜೀವನಕ್ಕೂ ವಿಶೇಷ ಪ್ರೋತ್ಸಾಹ ದೊರೆಯಿತು. ಇವರು ಮೈಸೂರಿನಲ್ಲಿ ಮೊಟ್ಟಮೊದಲು ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿ, ಈ ಬಗೆಯ ಸಭೆಗಳು ಇತರ ಸಂಸ್ಥಾನಗಳಲ್ಲಿ ಏರ್ಪಡುವುದಕ್ಕೆ ಮಾರ್ಗದರ್ಶಿಗಳಾದರು.

## ೩. ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಜನನ, ಬಾಲ್ಯ, ವಿದ್ಯಾಭ್ಯಾಸ ಮತ್ತು ವಿವಾಹ

ಇಂಗ್ಲಿಷರು ೧೮೮೧ರಲ್ಲಿ ಮೈಸೂರು ರಾಜ್ಯವನ್ನು ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಹಿಂದಕ್ಕೆ ಕೊಟ್ಟಾಗ ಮೈಸೂರಿನ ಪ್ರಜೆಗಳಿಗೆ ಉಂಟಾದ ಆನಂದವನ್ನು ಹೇಳತೀರದು. ಇದಾದ ಮೂರು ವರ್ಷಗಳ ಮೇಲೆ ೪-೬-೧೮೮೪ರಲ್ಲಿ (ತಾರಣ ಸಂವತ್ಸರದ ಜ್ಯೇಷ್ಠ ಶುದ್ಧ ಏಕಾದಶಿಯ ದಿನ) ನಮ್ಮನ್ನಾಳುವ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರವರು ಶ್ರೀ ವಾಣೀವಿಲಾಸ ಸನ್ನಿಧಾನದ ಕೆಂಪನಂಜಮ್ಮಣ್ಣಿಯವರ ಗರ್ಭದಲ್ಲಿ ಜನಿಸಿದರು. ಆ ದಿನ ಮೈಸೂರಿನ ರಾಜಮನೆತನದವರಿಗೂ, ಪ್ರಜೆಗಳಿಗೂ ಅಪಾರವಾದ ಆನಂದ.

೧೮೮೮ನೆಯ ಜೂನ್ ತಿಂಗಳಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ದ್ವಿತೀಯ ಪುತ್ರೋತ್ಸವವಾಯಿತು. ಈ ಶಿಶುವಿಗೆ ಶ್ರೀ ಕಂಠೀರವ ನರಸಿಂಹರಾಜ ಒಡೆಯರೆಂಬುದಾಗಿ ನಾಮಕರಣ ಮಾಡಿದರು. ಇವರೇ ನಮ್ಮ ಯುವರಾಜರು.

ಶ್ರೀ ಕೃಷ್ಣರಾಜ ಒಡೆಯರವರಿಗೆ ಆರನೆಯ ವರ್ಷ ವಯಸ್ಸಿನಲ್ಲಿ ಶಾಸ್ತ್ರೋಕ್ತ ಪ್ರಕಾರ ಅಕ್ಷರಾಭ್ಯಾಸವಾಯಿತು. ಮುಂದೆ ಕೆಲವು ತಿಂಗಳುಗಳೊಳಗಾಗಿ ಇವರಿಗೆ ವಿದ್ಯಾಭ್ಯಾಸ ಮಾಡಿಸಲು ಶ್ರೀಯುತ ಪೂರ್ಣ ರಾಘವೇಂದ್ರರಾಯರನ್ನು ಗುರುಗಳನ್ನಾಗಿ ನೇಮಕಮಾಡಿದರು. ಇವರು ಎರಡು ವರ್ಷಗಳು ಪಾಠ ಹೇಳಿದರು. ಕನ್ನಡ ಪಾಠವನ್ನು ಹೇಳುವುದಕ್ಕಾಗಿ ಅರಮನೆಯ ವಿದ್ವಾಂಸರಾದ ಶ್ರೀ ಸೋಸಲೆ ಅಯ್ಯಾ ಶಾಸ್ತ್ರಿಗಳವರನ್ನು ನೇಮಿಸಿದರು.

ನಮ್ಮ ಮಹಾರಾಜರವರಿಗೆ ಎಂಟು ವರ್ಷಗಳು ತುಂಬಿದ ತರುವಾಯ ೧೮೯೨ನೆಯ ಜೂನ್ ತಿಂಗಳಲ್ಲಿ ಖಾಸ ಬಂಗಲೆ(ಸಮ್ಮರ್ ಪ್ಯಾಲೆಸ್)ಯಲ್ಲಿ ಅರಸು ಮಕ್ಕಳ ಪಾಠಶಾಲೆ(ರಾಯಲ್ ಸ್ಕೂಲ್)ಯೊಂದು ಇವರಿಗಾಗಿಯೇ ಏರ್ಪಾಡಾಯಿತು. ಅಲ್ಲಿ ಇವರೊಂದಿಗೆ ವಿದ್ಯಾಭ್ಯಾಸಮಾಡಲು ಅರಮನೆಗೆ ಸಂಬಂಧಪಟ್ಟ ಅಧಿಕಾರಿಗಳ ಮಕ್ಕಳಲ್ಲಿ ಯೋಗ್ಯರಾದವರನ್ನು ಜಾಗರೂಕತೆಯಿಂದ ಆರಿಸಿಕೊಂಡರು. ಹೀಗೆ ಆರಿಸಿಕೊಂಡ ಸಹಪಾಠಿಗಳಲ್ಲಿ ಈಗ ನಮ್ಮ ಸಂಸ್ಥಾನದ ದಿವಾನ್ ಪದವಿಯನ್ನಲಂಕರಿಸಿರುವ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರೂ ಒಬ್ಬರಾಗಿದ್ದರು.

ಪ್ರತಿ ದಿನವೂ ಪಾಠಗಳು ಸಕಾಲಕ್ಕೆ ಪ್ರಾರಂಭವಾಗಿ, ವೇಳಾಪತ್ರಿಕೆಯನ್ನನುಸರಿಸಿ ಕ್ರಮವಾಗಿ ನಡೆಯುತ್ತಿದ್ದವು. ಪ್ರತಿಯೊಬ್ಬರೂ ಹೊತ್ತಿಗೆ ಮುಂಚೆ ಪಾಠಶಾಲೆಗೆ ಬರಬೇಕಾಗಿತ್ತು; ತಪ್ಪಿದವರಿಗೆ ಶಿಕ್ಷೆಯೂ ಆಗುತ್ತಿತ್ತು. ಹದಿನೆಂಟು ತಿಂಗಳುಗಳ ತರುವಾಯ ಮಿ॥ ಜೆ.ಜೆ. ವಿಟ್ಲೆ ಎಂಬ ಆಂಗ್ಲೇಯ ಬೋಧಕರನ್ನು ಪಾಠ ಹೇಳುವುದಕ್ಕಾಗಿ ನೇಮಿಸಿದರು. ಶ್ರೀಮನ್ಮಹಾರಾಜರವರಿಗೆ ಇಂಗ್ಲಿಷ್, ಗಣಿತ, ಚರಿತ್ರೆ ಮತ್ತು ಭೂಗೋಳವನ್ನು ಪಾಠಹೇಳುವುದರ ಜೊತೆಗೆ, ವಸ್ತುಪಾಠಗಳ ರೂಪದಲ್ಲಿ ವಿಜ್ಞಾನ ಸಂಬಂಧವಾದ

ವಿಚಾರಗಳನ್ನೂ ಬೋಧಿಸುತ್ತಿದ್ದರು. ದೇಶಭಾಷೆಗಳಲ್ಲಿ ಇವರಿಗೆ ಕನ್ನಡ ಮತ್ತು ಉರ್ದುವನ್ನು ಹೇಳಿಕೊಡುತ್ತಿದ್ದರು.

ಹೀಗೆ ಪಾಠಪ್ರವಚನಗಳು ನಡೆಯುತ್ತಿರುವಾಗ ೧೮೯೪ನೆಯ ಡಿಸೆಂಬರ್ ೨೮ನೆಯ ತಾರೀಖಿನ ದಿನ ಶ್ರೀ ಚಾಮರಾಜೇಂದ್ರ ಒಡೆಯರವರು ಕಂಠನಾಳರೋಗ ಪೀಡಿತರಾಗಿ, ಕಲ್ಕತ್ತೆಯಲ್ಲಿ ಕಾಲವಾದರು. ಇದರಿಂದ ಶ್ರೀ ಕೃಷ್ಣರಾಜ ಒಡೆಯರವರ ವಿದ್ಯಾಭ್ಯಾಸವು ಮುಂದುವರಿಯಲು ಹದಿನೆಂಟು ತಿಂಗಳುಗಳ ಕಾಲ ಅವಕಾಶ ವಿಲ್ಲವಾಯಿತು.

ಶ್ರೀ ಚಾಮರಾಜೇಂದ್ರ ಒಡೆಯರವರು ಕಾಲವಾದಾಗ ನಮ್ಮನ್ನಾಳುವ ಮಹಾಸ್ವಾಮಿಯವರಿಗೆ ಇನ್ನೂ ಹತ್ತು ವರ್ಷ ಮಾತ್ರ ವಯಸ್ಸು. ಈ ಚಿಕ್ಕ ವಯಸ್ಸಿನಲ್ಲಿಯೇ ಇವರು ರಾಜ್ಯಭಾರವನ್ನು ವಹಿಸಬೇಕಾಯಿತು. ಇವರಿಗೆ ೧೮೯೫ನೆಯ ಫೆಬ್ರವರಿ ಒಂದನೆಯ ತಾರೀಖಿನ ದಿನ ಯಥಾವಿಧಿಯಾಗಿ ರಾಜ್ಯಪಟ್ಟಾಭಿಷೇಕವು ನೆರವೇರಿತು. ಇವರು ಪ್ರಾಪ್ತವಯಸ್ಕರಾಗುವವರೆಗೂ ಇವರ ತಾಯಿಯವರಾದ ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದ ಕೆಂಪನಂಜಮ್ಮಣ್ಣಿಯವರು ರೀಜಂಟರಾಗಿ, ಸಂಸ್ಥಾನದ ಆಡಳಿತವನ್ನು ಕೈಕೊಂಡು, ಪ್ರಜೆಗಳನ್ನು ಪುತ್ರರಂತೆ ಪಾಲಿಸಿದರು.

ಶ್ರೀಮನ್ಮಹಾರಾಜರವರಿಗೆ ಹನ್ನೆರಡು ವರ್ಷ ವಯಸ್ಸಾದಾಗ ಅಂದರೆ ೧೮೯೬ನೆಯ ಜೂನ್ ತಿಂಗಳಲ್ಲಿ ಇಂಡಿಯ ಸರಕಾರದವರು ಇವರ ವಿದ್ಯಾಭ್ಯಾಸವನ್ನು ಉಚಿತರೀತಿಯಲ್ಲಿ ಮುಂದುವರಿಸುವುದರ ಜೊತೆಗೆ ಇವರಿಗೆ ಆವಶ್ಯಕವಾದ ರಾಜಕೀಯ ಶಿಕ್ಷಣವನ್ನು ಕೊಡುವುದಕ್ಕಾಗಿ ಮಿ॥ (ಅನಂತರ ಸರ್)ಸ್ಟೂಅರ್ಟ್ ಎಂ. ಫ್ರೇಸರ್, ಐ. ಸಿ. ಎಸ್., ಅವರನ್ನು ನೇಮಿಸಿದರು.

ಇದುವರೆಗೆ ಕೋಟೆಯ ಹಳೆಯ ಅರಮನೆಯಲ್ಲಿ ವಾಸಮಾಡುತ್ತಿದ್ದ ಶ್ರೀಮನ್ಮಹಾರಾಜರವರು ಅಲ್ಲಿಂದ ಖಾಸಬಂಗಲೆಗೆ ವಾಸಕ್ಕೆ ಹೋದರು. ಇದು ಅವರ ಮನೆಯೂ ಪಾಠಶಾಲೆಯೂ ಎರಡೂ ಆಯಿತು. ಇಲ್ಲಿ ಮಹಾರಾಜರವರು ತಮ್ಮ ಸಹಪಾಠಿಗಳೊಡನೆ ವಾಸಮಾಡಿಕೊಂಡಿದ್ದರು. ಪ್ರತಿದಿನವೂ ೧೧ರಿಂದ ೫ ಘಂಟೆಯವರೆಗೆ ನಡೆಯುವ ಕ್ಲಿಪ್ತವಾದ ಪಾಠಗಳೊಂದಿಗೆ ಮಹಾರಾಜರವರಿಗೂ, ಅವರ ಜೊತೆಗಾರರಿಗೂ ಡ್ರಿಲ್, ಕುದುರೆಸವಾರಿ, ಕ್ರಿಕೆಟ್, ಟೆನಿಸ್ ಆಟಗಳನ್ನೂ, ಪೋಲೋ ಮತ್ತು ಬೇಟೆಯಾಡುವುದನ್ನೂ ಅಭ್ಯಾಸ ಮಾಡಿಸುತ್ತಿದ್ದರು. ಶ್ರೀಮನ್ಮಹಾರಾಜರವರು ಎರಡು ಕುದುರೆ ಕಟ್ಟಿದ ಗಾಡಿಯನ್ನು ಹೊಡೆಯಲು ಕಲಿತುದಲ್ಲದೆ, ಕೆಲವು ದಿನಗಳೊಳಗಾಗಿ ನಾಲ್ಕು ಕುದುರೆ ಕಟ್ಟಡ ಗಾಡಿಯನ್ನು ನಡೆಸುವುದರಲ್ಲಿಯೂ ಅನುಭವವನ್ನು ಪಡೆದರು.

ಇವರಿಗೆ ಹದಿನಾರು ವರ್ಷ ವಯಸ್ಸಾಗುತ್ತಲೇ, ೧೯೦೦ನೆಯ ಇಸವಿ ಜೂನ್ ತಿಂಗಳಲ್ಲಿ ಕಥೆವಾಡದ ರಾಣಾ ವಾಣಾರವರ ದ್ವಿತೀಯ ಪುತ್ರಿಯಾದ ಶ್ರೀಪ್ರತಾಪಕುಮಾರಿ ಬಾಯಿಯವರನ್ನು ಕೊಟ್ಟು ಮದುವೆಯಾಯಿತು. ಇವರೇ ಶ್ರೀಲಕ್ಷ್ಮೀವಿಲಾಸ ಸನ್ನಿಧಾನದವರು.

ಶ್ರೀಮನ್ಮಹಾರಾಜರವರು ೧೯೦೨ರಲ್ಲಿ ರಾಜ್ಯಭಾರವನ್ನು ವಹಿಸುವುದಕ್ಕೆ ಮೊದಲು ಮೈಸೂರು ಸಂಸ್ಥಾನದಲ್ಲಿ ಮೂರುಸಲವೂ ಸಂಸ್ಥಾನದ ಹೊರಗಡೆ ಎರಡುಸಲವೂ ಸಂಚಾರ ಹೊರಟಿದ್ದರು. ಇದರಿಂದ ಸಂಸ್ಥಾನವನ್ನೆಲ್ಲಾ ನೋಡಿದಂತಾದುದಲ್ಲದೆ, ಪ್ರಜೆಗಳ ಕಷ್ಟಸುಖಗಳು ಇವರಿಗೆ ಪ್ರತ್ಯಕ್ಷವಾಗಿ ಕಂಡುಬಂದುವು. ಇವರು ಸಂಸ್ಥಾನದಲ್ಲಿ ನೋಡಬೇಕಾದ ಮುಖ್ಯಸ್ಥಳವು ಯಾವುದೂ ಉಳಿಯಲಿಲ್ಲ. ಸಂಸ್ಥಾನದ ಹೊರಗಡೆ ಮೊದಲನೆಯ ಸಲ ಸಂಚಾರ ಹೊರಟ ಸಂದರ್ಭದಲ್ಲಿ ಇವರು ಮದರಾಸಿನಿಂದ ಕಲ್ಕತ್ತಾಪಟ್ಟಣಕ್ಕೆ ಸಮುದ್ರದಮೇಲೆ ಪ್ರಯಾಣ ಮಾಡಿ, ಬಂಗಾಳ, ಸಂಯುಕ್ತರಾಜ್ಯಗಳು, ಪಂಜಾಬು, ರಾಜಪುಟಾಣ ಮತ್ತು ಬೊಂಬಾಯಿ ಆಧಿಪತ್ಯದ ಮುಖ್ಯಮುಖ್ಯ ಸ್ಥಳಗಳನ್ನೆಲ್ಲ ನೋಡಿ ಬಂದರು. ಈ ಸಂದರ್ಭದಲ್ಲಿಯೇ ಇವರು ಕಾಶಿ, ಜಯಪುರ ಮತ್ತು ಬರೋಡಾ ಸಂಸ್ಥಾನಗಳ ಮುಖ್ಯ ಪಟ್ಟಣಗಳನ್ನೂ ಸಂದರ್ಶಿಸಿದರು. ಇವರ ಎರಡನೆಯ ಸಂಚಾರದಲ್ಲಿ ತಮ್ಮ ತಮ್ಮಂದಿರೊಂದಿಗೆ ಬರ್ಮಾದೇಶಕ್ಕೂ ಹೋಗಿದ್ದರು.

ರಾಜ್ಯದ ಆಡಳಿತವನ್ನು ವಹಿಸುವುದಕ್ಕೆ ಮೊದಲು ಶ್ರೀಮನ್ಮಹಾರಾಜರವರು ಸ್ವದೇಶ, ಪರದೇಶ ಸಂಚಾರಗಳನ್ನು ಮುಗಿಸಿಕೊಂಡು ಅನೇಕ ವಿಚಾರಗಳನ್ನು ಮನದಟ್ಟು ಮಾಡಿಕೊಂಡಿದ್ದರು. ಇವರಿಗೆ ರಾಜ್ಯದಾಡಳಿತದ ಮುಖ್ಯ ತತ್ವಗಳೂ ಬೋಧಿಸಲ್ಪಟ್ಟಿದ್ದವು. ಇವರು ಬೆಂಗಳೂರು ಮತ್ತು ಮೈಸೂರಿನಲ್ಲಿರುವ ಮುಖ್ಯವಾದ ಇಲಾಖೆಗಳ ಕಛೇರಿಗಳನ್ನೆಲ್ಲಾ ಸ್ವತಃ ನೋಡಿದುದಲ್ಲದೆ, ಒಂದು ಸಲ ಬೆಂಗಳೂರಿನಲ್ಲಿ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ವಿಚಾರಣೆಯ ಕಾಲದಲ್ಲಿ ಎದುರಿಗಿದ್ದು ವಿಚಾರಣೆಯೆಲ್ಲಾ ಮುಗಿದಮೇಲೆ, ತಾವು ತೀರ್ಪನ್ನು ಬರೆದಿಟ್ಟರು. ಅನುಭವಶಾಲಿಗಳಾದ ಮ್ಯಾಜಿಸ್ಟ್ರೇಟರು ಕೊಟ್ಟ ತೀರ್ಪಿಗೂ ಇದಕ್ಕೂ ಯಾವ ವ್ಯತ್ಯಾಸವೂ ಇರಲಿಲ್ಲ.

ಶ್ರೀಮನ್ಮಹಾರಾಜರವರು ಸಭೆಗಳಲ್ಲಿ ಭಾಷಣಮಾಡುವ ಕುಶಲಕಲೆಗೆ ಹೆಚ್ಚು ಗಮನಕೊಟ್ಟರು. ಅವರು ಇಂಗ್ಲಿಷಿನಲ್ಲಿಯೇ ಆಗಲಿ, ಕನ್ನಡದಲ್ಲಿಯೇ ಆಗಲಿ, ಉರ್ದುವಿನಲ್ಲಿಯೇ ಆಗಲಿ ಭಾಷಣವನ್ನು ಮಾಡುವಾಗ ಎಷ್ಟು ಸ್ಪಷ್ಟವಾಗಿಯೂ, ಎಷ್ಟು ಮಧುರವಾಗಿಯೂ, ಗಂಭೀರವಾಗಿಯೂ ಮಾತನಾಡುತ್ತಾರೆಂಬುದು ಅವರ ಭಾಷಣವನ್ನು ಕೇಳಿರುವವರೆಲ್ಲರಿಗೂ ತಿಳಿದ ವಿಷಯವೇ.

ಶ್ರೀ ಕೃಷ್ಣರಾಜ ಒಡೆಯರವರಿಗೆ ೧೯೦೨ನೆಯ ಇಸವಿ ಆಗಸ್ಟ್ ತಿಂಗಳಲ್ಲಿ ರಾಜ್ಯಭಾರವನ್ನು ವಹಿಸುತ್ತಲೇ ಅವರ ವಿದ್ಯಾಗುರುಗಳಾದ ಮಿ॥ ಸ್ಟೂಅರ್ಟ್ ಎಂ.ಫ್ರೇಸರವರು ಮೈಸೂರು ಸಂಸ್ಥಾನವನ್ನು ಬಿಟ್ಟು ಹೊರಟರು. ಆಳುವ ಮಹಾಸ್ವಾಮಿಯವರಿಗೆ ಖಾಸಗಿ ಕಾರ್ಯದರ್ಶಿಗಳಾಗಿರಲು ಮಿ॥ ಇ. ಮೆಕಾನಕಿ, ಐ. ಸಿ. ಎಸ್., ಅವರನ್ನು, ಆಗಿನ ಕಾಲದಲ್ಲಿ ಇಂಡಿಯದ ವೈಸರಾಯರಾಗಿದ್ದ ಲಾರ್ಡ್ ಕರ್ಜನ್ ಅವರೇ ಆರಿಸಿ ನೇಮಿಸಿದರು.

ರಾಜ್ಯದ ಸೂತ್ರಗಳನ್ನು ವಹಿಸಿದಂದಿನಿಂದ ಶ್ರೀಮನ್ಮಹಾರಾಜರವರು ಸರಕಾರಿ ರಜಾದಿನಗಳು ಹೊರತು ಮಿಕ್ಕ ದಿನಗಳಲ್ಲೆಲ್ಲಾ ಮಧ್ಯಾಹ್ನ ೧೨ ರಿಂದ ೪ ಘಂಟೆಯವರೆಗೆ

ತಮ್ಮ ಸೆಕ್ರೆಟರಿಗಳೊಂದಿಗೆ ಕಛೇರಿಯಲ್ಲಿ ಶ್ರದ್ಧೆಯಿಂದ ಕುಳಿತು ಕೆಲಸ ಮಾಡುತ್ತಿದ್ದರು. ಎಷ್ಟೋದಿನಗಳಲ್ಲಿ ಮಹಾಸ್ವಾಮಿಯವರು ರಾತ್ರಿ ಎಂಟು ಘಂಟೆಯಲ್ಲಿಯೂ ಸಹ ಕಛೇರಿಯಲ್ಲಿ ಕುಳಿತು ಕೆಲಸಮಾಡಿದ್ದಾರೆ. ಮುಖ್ಯ ಅಧಿಕಾರಿಗಳು ತಮ್ಮನ್ನು ನೋಡಲು ಬಂದಾಗ ಅವರಿಗೆ ದರ್ಶನಕೊಟ್ಟು, ಕೆಲವು ವರ್ಷಗಳಲ್ಲಿ ಸಂಸ್ಥಾನದಲ್ಲಿರುವ ಸಮಸ್ತ ಅಧಿಕಾರಿಗಳ ಪರಿಚಯವನ್ನೂ ಮಾಡಿಕೊಂಡರು. ಸಂಸ್ಥಾನದಲ್ಲಿರುವ ಮುಖ್ಯ ಮುಖ್ಯ ಅಧಿಕಾರಿಗಳನ್ನೆಲ್ಲಾ ಹೇಗೆ ಪರಿಚಯಮಾಡಿಕೊಂಡಿದ್ದರೋ ಹಾಗೆಯೇ ಜನಸಾಮಾನ್ಯದ ಮುಖಂಡರನ್ನೆಲ್ಲಾ ಚೆನ್ನಾಗಿಬಲ್ಲವರಾಗಿದ್ದರು.

ಆಗರ್ಭಶ್ರೀಮಂತರಾಗಿದ್ದರೂ ಆಳುವ ಮಹಾಸ್ವಾಮಿಯವರು ಬಹು ಸರಳ ಜೀವಿಗಳು. ಒಂದು ದಿನವಾದರೂ ಯಾರ ವಿಷಯದಲ್ಲಿಯೂ ಕ್ರೂರವಾಗಿ ಮಾತನಾಡಿದವರಲ್ಲ. ಪ್ರಜೆಗಳ ವಿಷಯದಲ್ಲಿ ಇವರಿಗೆ ಬಲು ಅನುತಾಪ. ಪ್ರಾಣಿಮಾತ್ರದಲ್ಲಿ ಬಹಳದಯೆ. ಪೋಲೋ, ರ್‍ಯಾಕೆಟ್ ಮೊದಲಾದ ಆಟಗಳಲ್ಲಿ ಇವರು ಬಲು ನಿಪುಣರು. ಯಾವ ಮೋಟಾರನ್ನಾದರೂ ಚತುರತೆಯಿಂದ ನಡೆಸಬಲ್ಲರು. ಇವರಿಗೆ ಸಂಗೀತದಲ್ಲಿ ಪೂರ್ಣ ಪಾಂಡಿತ್ಯ. ಪಿಟೀಲು ಮತ್ತು ಪಿಯಾನೋವನ್ನು ಬಾರಿಸುವುದರಲ್ಲಿ ಬಲು ಸಮರ್ಥರು. ಇವರಿಗೆ ಕರ್ಣಾಟಕ, ದ್ರಾವಿಡ ಮತ್ತು ಹಿಂದುಸ್ಥಾನಿ ಸಂಗೀತದಲ್ಲಿರುವಂತೆಯೇ ಐರೋಪ್ಯ ಸಂಗೀತದಲ್ಲೂ ವಿಶೇಷ ಪರಿಚಯ. ಇವರಿಗೆ ತಮ್ಮ ತಾಯಿಯಲ್ಲಿ ಬಹು ಭಕ್ತಿ; ಇವರಿಗಿರುವ ಭ್ರಾತೃ ಪ್ರೇಮವೂ ಅತಿಶಯವಾದುದು. ಇವರು ಆಚಾರಶೀಲರೂ, ದೈವಭಕ್ತರೂ ಪೂರ್ವಸಂಪ್ರದಾಯಬದ್ಧರೂ ಆಗಿದ್ದರೂ, ಸರಿಯಾದ ಮಾರ್ಗದಲ್ಲಿ ನಡೆಯುವ ಇತರರನ್ನೂ ಒಪ್ಪಿ ಗೌರವಿಸತಕ್ಕವರು. ರಾಜ್ಯಭಾರ ನಿರ್ವಹಣದಲ್ಲಿ ಇಂತಹ ಪ್ರಭುಗಳು ಅತಿವಿರಳ. ಇವರನ್ನು ರಾಜಋಷಿಗಳೆಂದೂ, ಇವರ ರಾಜ್ಯವನ್ನು ರಾಮರಾಜ್ಯವೆಂದೂ ಜನರು ಎಲ್ಲೆಲ್ಲಿಯೂ ಕೊಂಡಾಡುತ್ತಿರುವುದರಲ್ಲಿ ಅತಿಶಯೋಕ್ತಿ ಲೇಶವೂ ಇಲ್ಲ.

# ೪. ರಾಜ್ಯ ಪಟ್ಟಾಭಿಷೇಕ ಮಹೋತ್ಸವ

೧೯೦೨ನೆಯ ಇಸವಿ ಆಗಸ್ಟ್ ೮ನೆಯ ತಾರೀಖಿನ ದಿನ ಶ್ರೀಕೃಷ್ಣರಾಜೇಂದ್ರ ಒಡೆಯರವರಿಗೆ ಜಗನ್ಮೋಹನ ಬಂಗಲೆಯಲ್ಲಿ ರಾಜ್ಯದಾಡಳಿತವನ್ನು ವಹಿಸುವ ಮಹೋತ್ಸವವು ಅತಿ ವಿಜೃಂಭಣೆಯಿಂದ ನಡೆಯಿತು. ಆಗ ಇಂಡಿಯದೇಶದ ವೈಸರಾಯರಾಗಿದ್ದ ಲಾರ್ಡ್ ಕರ್ಜನ್ ಅವರು ಇದಕ್ಕಾಗಿ ಮೈಸೂರಿಗೆ ತಾವೇ ದಯೆಮಾಡಿಸಿ, ಈ ಕಾರ್ಯವನ್ನು ನೆರವೇರಿಸಿದರು. ಈ ಸಂಭ್ರಮವನ್ನು ನೋಡುವುದಕ್ಕೆ ದೇಶದ ಅನೇಕ ಕಡೆಗಳಿಂದ ಸಾವಿರಾರು ಮಂದಿ ಮೈಸೂರಿಗೆ ಬಂದಿದ್ದರು. ಉತ್ಸವದ ದಿನಗಳಲ್ಲಿ ಬೀದಿಗಳನ್ನೆಲ್ಲಾ ಅಲಂಕರಿಸಿ, ಸೈನಿಕರನ್ನು ಒಂದು ಕ್ರಮದಿಂದ ರಸ್ತೆಯ ಎರಡು ಕಡೆಗಳಲ್ಲಿಯೂ ನಿಲ್ಲಿಸಿದ್ದರು.

ದರಬಾರು ಮಂದಿರಕ್ಕೆ ವೈಸರಾಯವರು ಇಷ್ಟ ಪರಿವಾರದೊಂದಿಗೆ ತಮ್ಮ ಬೀಡಾರದಿಂದ ಹೊರಟ ಕೂಡಲೆ ೩೧ ತೋಪುಗಳೂ, ಆಸ್ಥಾನ ಮಂದಿರವನ್ನು ತಲಪುತ್ತಲೇ ೩೧ ತೋಪುಗಳೂ, ಗೌರವಾರ್ಥವಾಗಿ ಹಾರಿದವು. ರಾಜಸಭಾ ಮಂದಿರದ ಬಳಿಯಲ್ಲಿ ಲಾರ್ಡ್ ಕರ್ಜನ್ ಅವರು ಬ್ರಿಟಿಷ್ ರೆಸಿಡೆಂಟರೊಂದಿಗೂ, ಸಂಸ್ಥಾನದ ಇತರ ಅಧಿಕಾರಿಗಳೊಂದಿಗೂ ಉಚಿತ ವೈಭವದಿಂದ ಬರಮಾಡಿಕೊಳ್ಳಲ್ಪಟ್ಟರು. ಅಲ್ಲಿಂದ ಸಭಿಕರೆಲ್ಲರೂ ಮಂಟಪದೊಳಕ್ಕೆ ಉತ್ಸವದಿಂದ ಹೊರಟರು. ಶ್ರೀಮನ್ಮಹಾರಾಜರವರೂ ವೈಸರಾಯವರೂ ಉತ್ಸವದ ಕಡೆಯಲ್ಲಿ ಬಂದರು. ಎಲ್ಲರೂ ವೇದಿಕೆಯ ಮುಂಭಾಗದಲ್ಲಿ ಏರ್ಪಡಿಸಿದ್ದ ಅವರವರ ಉಚಿತಾಸನಗಳಲ್ಲಿ ಮಂಡಿಸುವವರೆಗೂ, ಆ ಮಂಟಪದಲ್ಲಿ ನೆರದಿದ್ದವರೆಲ್ಲರೂ ಎದ್ದು ನಿಂತಿದ್ದರು. ವೇದಿಕೆಯನ್ನು ಸುವರ್ಣವಸ್ತ್ರಗಳಿಂದ ರಾಜವೈಭವಕ್ಕೆ ತಕ್ಕ ರೀತಿಯಲ್ಲಿ ಅಲಂಕರಿಸಿ, ಆದರಮೇಲೆ ಎರಡು ಬೆಳ್ಳಿಯ ಅಂದವಾದ ಕುರ್ಚಿಗಳನ್ನು ಇರಿಸಿದ್ದರು. ವೇದಿಕೆಯ ಕೆಳಗಡೆ ಮುಂಭಾಗದಲ್ಲಿ ವೈಸರಾಯವರೂ, ಅವರ ಎಡ ಪಾರ್ಶ್ವದಲ್ಲಿ ಬ್ರಿಟಿಷ್ ರೆಸಿಡೆಂಟರೂ, ಇತರ ಬ್ರಿಟಿಷ್ ಅಧಿಕಾರಿಗಳೂ, ಅತಿಥಿಗಳೂ, ಅವರ ಬಲಪಾರ್ಶ್ವದಲ್ಲಿ ಶ್ರೀಮನ್ಮಹಾರಾಜರವರೂ, ಇತರ ರಾಜಪಿಂಡೆಯವರೂ, ಸರಕಾರಿ ಉದ್ಯೋಗಸ್ಥರೂ, ಅತಿಥಿಗಳೂ ಅವರವರ ಸ್ಥಾನ ಗೌರವಕ್ಕೆ ತಕ್ಕಂತೆ ಕ್ರಮವಾಗಿ ಕುಳಿತಿದ್ದರು.

ಮುಹೂರ್ತಕಾಲಕ್ಕೆ ಸರಿಯಾಗಿ ವೈಸರಾಯವರು ಶ್ರೀಮನ್ಮಹಾರಾಜರವರನ್ನು ವೇದಿಕೆಯ ಮೇಲೆ ಕರದೊಯ್ದು ಭದ್ರಾಸನದ ಮೇಲೆ ಕುಳ್ಳಿರಿಸಿ, ಭಾಷಣವನ್ನು ಮಾಡಿದರು. ಈ ಭಾಷಣದಲ್ಲಿ ಲಾರ್ಡ್ ಕರ್ಜನ್ ಅವರು ಮೈಸೂರು ಸಂಸ್ಥಾನದ ಪೂರ್ವಚರಿತ್ರೆಯನ್ನೆಲ್ಲಾ ಕ್ರೋಡೀಕರಿಸಿ ಹೇಳಿದುದಲ್ಲದೆ, ತಾವು ಇಂಡಿಯದೇಶಕ್ಕೆ ಬಂದ ಮೇಲೆ ಇಂತಹ ರಾಜರನ್ನು ಪ್ರತಿಷ್ಠೆಮಾಡುವ ಉತ್ಸವದಲ್ಲಿ ಭಾಗಿಯಾದುದು ಇದೇ ಮೊದಲೆಂದೂ, ತಮಗೆ ಈ ಸಂಸ್ಥಾನದಲ್ಲಿಯೂ, ಈ ಮಹಾರಾಜರಲ್ಲಿಯೂ ಅಪರಿಮಿತವಾದ ವಿಶ್ವಾಸವಿಲ್ಲದಿದ್ದರೆ, ಈ ಮಳೆಗಾಲದಲ್ಲಿ ತಾವು ಸಿಮ್ಲಾ ನಗರವನ್ನು ಬಿಟ್ಟು ಇಷ್ಟುದೂರ ಪ್ರಯಾಣಮಾಡಿ ಬರುತ್ತಲೆ ಇರಲಿಲ್ಲವೆಂದೂ ಹೇಳಿದರು. ಈ ಸುಸಮಯದಲ್ಲಿ ವೈಸರಾಯವರು, ಶ್ರೀಮನ್ಮಹಾರಾಜರವರು ಪ್ರಾಪ್ತವಯಸ್ಕರಾಗುವವರೆಗೆ ಎಂಟು ವರ್ಷಗಳ ಕಾಲ, ಸರ್ವಜನ ಸಮ್ಮತವಾದ ರೀತಿಯಲ್ಲಿ, ಕೇವಲ ವಿಚಕ್ಷಣೆಯಿಂದ

ಮಹಾಮಾತ್ರಶ್ರೀವಾಣೀವಿಲಾಸ ಸನ್ನಿಧಾನದವರು ರಾಜ್ಯಭಾರ ನಡೆಸಿದ ವಿಚಾರವನ್ನು ಸಭಿಕರ ಮುಂದೆ ಕೊಂಡಾಡಿದರು. ಮತ್ತು ಅವರು ತೋರಿಸಿದ ಕಾರ್ಯದಕ್ಷತೆಗಾಗಿ ಅವರ ಜೀವಾವಧಿ ೧೯ ಕುಶಾಲು ತೋಪುಗಳಾಗುವಂತೆ, ತಾವು ಸಾರ್ವಭೌಮ ಸರಕಾರದವರಿಗೆ ಶಿಫಾರಸು ಮಾಡಿದ್ದರೆಂತಲೂ, ಅವರು ಅದನ್ನು ಅಂಗೀಕರಿಸಿ, ಈ ಮಹಾಮಾತ್ರಶ್ರೀಯವರಲ್ಲಿ ಅಸಾಧಾರಣವಾದ ಗೌರವವನ್ನು ಪ್ರದರ್ಶಿಸಿರುವರೆಂತಲೂ ತಿಳಿಸಿ, ತಮ್ಮ ಅಮೋಘವಾದ ಭಾಷಣವನ್ನು ಮುಗಿಸುವುದಕ್ಕೆ ಮೊದಲು ಶ್ರೀಮನ್ಮಹಾರಾಜರವರಿಗೆ ಕೆಲವು ಸಮಯೋಚಿತವಾದ ಬುದ್ಧಿವಾದಗಳನ್ನು ಹೇಳಿದರು.

ಇದಕ್ಕೆ ಪ್ರತ್ಯುತ್ತರವಾಗಿ ಶ್ರೀಮನ್ಮಹಾರಾಜರವರು ಪ್ರತಿಭಾಯುಕ್ತವಾದ ಭಾಷಣವನ್ನು ಮಾಡಿ, ತಾವು ಸಾರ್ವಭೌಮ ಸರಕಾರಕ್ಕೆ ಯಾವ ಜೀವವೂ ಋಣಿಗಳೆಂದು ತಿಳಿಸಿದರು. ಇಷ್ಟೇ ಅಲ್ಲದೆ ವೈಸರಾಯವರ ವಿಚಾರದಲ್ಲಿ ತಮಗಿರುವ ಅಸಾಧಾರಣವಾದ ಗೌರವವನ್ನು ವ್ಯಕ್ತಗೊಳಿಸಿ, ಅವರು ಹೇಳಿದ ಬುದ್ಧಿಯ ಮಾತುಗಳು ತಮ್ಮ ಹೃದಯದಲ್ಲಿ ಬೇರೂರಿರುವುವೆಂದೂ, ತಮ್ಮ ಮೇಲೆ ಅಂದಿನಿಂದ ಬಿದ್ದಿರುವ ಉತ್ತರವಾದಿತ್ವದ ಹೊರೆ ಎಷ್ಟು ಮಹತ್ತರವೆಂಬುದನ್ನು ತಾವು ತಿಳಿದುಕೊಂಡಿರುವರೆಂದೂ, ಅದನ್ನು ಮಾತಿನಲ್ಲಿ ಹೇಳಿ ಮುಗಿಸುವುದಕ್ಕಿಂತಲೂ ಕಾರ್ಯದಲ್ಲಿ ಸಾಧಿಸಿ ತೋರಿಸಬೇಕೆಂಬುದು ತಮ್ಮ ಆಶಯವೆಂದೂ, ಸೂಚಿಸಿದರು. ಅಲ್ಲದೆ ತಮ್ಮ ವಿದ್ಯಾಗುರುಗಳಾದ ಮಿ॥ ಸ್ಟೂಅರ್ಟ್ ಎಂ. ಫ್ರೇಸರವರು ತಮಗೆ ಆರು ವರ್ಷಗಳ ಕಾಲ ಕಲಿಸಿದ ವಿದ್ಯೆಯ ಪ್ರಭಾವದಿಂದ ತಾವು ಕಾರ್ಯನಿರ್ವಾಹ ಮಾಡಬಲ್ಲರೆಂಬುದಾಗಿ ಅಪ್ಪಣೆ ಕೊಡಿಸಿ, ತಮ್ಮ ಪ್ರಜಾಸೌಖ್ಯಕ್ಕಾಗಿ ನಿರ್ದಾಕ್ಷಿಣ್ಯವಾಗಿ ಕೆಲಸಮಾಡಲು ತಮಗೆ ದೊರೆತಿರುವ ಅವಕಾಶವನ್ನು ಸಂಪೂರ್ಣವಾಗಿಯೂ, ಜಾಣತನದಿಂದಲೂ ಉಪಯೋಗಿಸಿಕೊಳ್ಳುವಂತೆ ಭಗವಂತನು ತಕ್ಕ ಸಾಮರ್ಥ್ಯವನ್ನು ತಮಗೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿ, ತಮ್ಮ ಭಾಷಣವನ್ನು ಮುಗಿಸಿದರು.

ತರುವಾಯ ಸಂಸ್ಥಾನದ ದಿವಾನರವರೂ, ಇತರ ಅಧಿಕಾರಿಗಳೂ, ವೈಸರಾಯವರಿಗೆ ಪದ್ಧತಿಯ ಮೇರೆಗೆ ನಜರನ್ನು ಒಪ್ಪಿಸಿದರು. ಸಭೆಯವರೆಲ್ಲರಿಗೂ ಪುಷ್ಪತಾಂಬೂಲಗಳನ್ನು ಕೊಟ್ಟಮೇಲೆ ದರಬಾರು ಮುಕ್ತಾಯವಾಗಿ, ವೈಸರಾಯವರೂ, ಶ್ರೀಮನ್ಮಹಾರಾಜರವರೂ ತಮ್ಮ ತಮ್ಮ ಬೀಡಾರಗಳಿಗೆ ಸಕಲ ರಾಜಮರ್ಯಾದೆಗಳೊಂದಿಗೆ ಬೀಳ್ಕೊಂಡರು.

ಹೀಗೆ ರಾಜ್ಯದಾಡಳಿತದ ಸೂತ್ರಗಳನ್ನು ವಹಿಸಿಕೊಂಡ ಆಳುವ ಮಹಾಸ್ವಾಮಿಯವರು ತಮ್ಮ ದೇಶದ ಏಳಿಗೆಯ ವಿಚಾರದಲ್ಲಿಯೂ, ತಮ್ಮ ಪ್ರಜೆಗಳ ಸುಖಸಂಪತ್ತುಗಳನ್ನು ಹೆಚ್ಚಿಸುವುದರಲ್ಲಿಯೂ, ಬಹಳ ಉತ್ಸಾಹಶೀಲರಾಗಿರುವರು. ಅವರು ೧೯೦೭ರಲ್ಲಿ, 'ನಮ್ಮ ರಮಣೀಯವಾದ ಸಂಸ್ಥಾನದ ಏಳಿಗೆಯನ್ನೂ, ಅದರ ಸಂಪತ್ತನ್ನೂ, ಮತ್ತು ನಮ್ಮ ಪ್ರೀತಿವಿಷಯರಾದ ಪ್ರಜೆಗಳ ಸೌಖ್ಯವನ್ನೂ ಹೆಚ್ಚಿಸುವುದರಲ್ಲಿ ನಮ್ಮಿಂದ ಸಾಧ್ಯವಾದಷ್ಟು ಪ್ರಯತ್ನ ಮಾಡುವುದೇ ನಮ್ಮ ಜೀವಮಾನದ ಮುಖ್ಯ ಧ್ಯೇಯವಾಗಿರುವುದು. ಈ ಉದ್ದೇಶವನ್ನು ಸಾಧಿಸಿಕೊಳ್ಳುವ ಪ್ರಯತ್ನದಲ್ಲಿ ನಮ್ಮ ಶ್ರಮವನ್ನು ನಾವು ಸ್ವಲ್ಪವೂ ಲಕ್ಷ್ಯಕ್ಕೆ ತರುವುದಿಲ್ಲವೆಂದು ನಿಮಗೆ ಭರವಸೆ ಕೊಡುತ್ತೇವೆ' ಎಂದು ಹೇಳುವುದೇ ಇದಕ್ಕೆ ನಿದರ್ಶನವಾಗಿದೆ.

## ೫. ರಾಜ್ಯಭಾರ

ಶ್ರೀ ಚಾಮರಾಜೇಂದ್ರ ಒಡೆಯರವರು ೧೮೮೧ ರಲ್ಲಿ ರಾಜ್ಯಾಧಿಕಾರವನ್ನು ವಹಿಸಿದಾಗ ರಾಜ್ಯದಾಡಳಿತವನ್ನು ನಿರ್ವಹಿಸುವುದಕ್ಕಾಗಿ ಮೂರು ಮಂದಿ ಸಚಿವರನ್ನೂ ಒಬ್ಬ ದಿವಾನರನ್ನೂ ನೇಮಿಸಿದರು. ಹೀಗೆ ನಿಯಮಿತರಾದ ದಿವಾನರವರೇ ಶ್ರೀಯುತ ರಂಗಾಚಾರ್ಲುಯವರು. ಇವರು ಎರಡು ವರ್ಷಗಳಕಾಲ ಮಾತ್ರ ದಿವಾನ್ ಪದವಿಯಲ್ಲಿದ್ದು ೧೮೮೩ರಲ್ಲಿ ಬೆನ್ನುಫಣಿಯಿಂದ ಮದರಾಸಿನಲ್ಲಿ ಮೃತಪಟ್ಟರು. ಇವರು ಮಾಡಿದ ಒಂದು ದೊಡ್ಡ ಕೆಲಸವೆಂದರೆ ಸಂಸ್ಥಾನದ ಪ್ರಜೆಗಳು ತಮ್ಮ ಕಷ್ಟ ಸುಖಗಳನ್ನು ಸರಕಾರದವರಿಗೆ ಪ್ರತ್ಯಕ್ಷವಾಗಿ ತಿಳಿಸಲು ಸಾಧ್ಯವಾಗುವಂತೆ ೧೮೮೧ರಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿದುದು. ಈ ಸಭೆ ಪ್ರತಿವರ್ಷವೂ ನವರಾತ್ರಿಯ ಕಾಲದಲ್ಲಿ ಮೈಸೂರಿನಲ್ಲಿ ನಡೆಯಬೇಕೆಂದು ವಿಧಾಯಕಮಾಡಿದರು. ಮೈಸೂರಿನಲ್ಲಿ ಕಟ್ಟಿರುವ 'ರಂಗಾಚಾರ್ಲು ಮೆಮೋರಿಯಲ್ ಹಾಲ್' ಅಥವಾ 'ಟೌನ್ ಹಾಲ್' ಎಂಬ ಅಂದವಾದ ಕಟ್ಟಡವು ಈ ಮಹನೀಯರ ಹೆಸರು ಮೈಸೂರು ಪ್ರಜೆಗಳ ನೆನಪಿನಲ್ಲಿ ಸದಾ ಇರುವಂತೆ ಮಾಡಿದೆ.

ಇವರ ತರುವಾಯ ೧೮೮೩ರಲ್ಲಿ ಶ್ರೀಯುತ ಕೆ. ಶೇಷಾದ್ರಿ ಅಯ್ಯರವರಿಗೆ ದಿವಾನ್ ಪದವಿ ಲಭಿಸಿತು. ಇವರು ಹದಿನೆಂಟು ವರ್ಷಗಳಕಾಲ ಈ ಪದವಿಯನ್ನು ಅಲಂಕರಿಸಿ ಮೈಸೂರು ಸಂಸ್ಥಾನವನ್ನು ಅಭಿವೃದ್ಧಿಗೆ ತಂದರು. ಇವರ ಕಾಲದಲ್ಲಿ ಬೆಂಗಳೂರು, ಮೈಸೂರು ಪಟ್ಟಣಗಳಲ್ಲಿ ನಲ್ಲಿಯ ಮೂಲಕ ನೀರು ಒದಗಿಸುವ ಏರ್ಪಾಡಾಯಿತು. ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ, ಅದರಿಂದ ಬೆಂಗಳೂರು, ಮೈಸೂರು ಮತ್ತು ಚಿನ್ನದ ಗಣಿಗಳಲ್ಲಿ ದೀಪಗಳನ್ನು ಹಚ್ಚಿಸುವುದಕ್ಕೂ, ಕೈಗಾರಿಕೆಯ ಯಂತ್ರಗಳನ್ನು ನಡೆಯಿಸುವುದಕ್ಕೂ ಏರ್ಪಡಿಸಿದರು. ಚಿತ್ರದುರ್ಗ ಡಿಸ್ಟ್ರಿಕ್ಟಿನಲ್ಲಿ ಮಾರೀಕಣಿವೆ ಕೆರೆಯನ್ನು ಮಾಡಿಸಿ, ಅದಕ್ಕೆ 'ವಾಣೀವಿಲಾಸ ಸಾಗರ' ವೆಂದು ನಾಮಕರಣ ಮಾಡಿದರು. ಈ ದಿವಾನರ ಹೆಸರನ್ನು ಶಾಶ್ವತಗೊಳಿಸಲು ಬೆಂಗಳೂರಿನಲ್ಲಿ 'ಶೇಷಾದ್ರಿ ಅಯ್ಯರ್ ಮೆಮೋರಿಯಲ್ ಹಾಲ್' ಎಂಬ ಉತ್ಕೃಷ್ಟವಾದ ಕಟ್ಟಡವನ್ನು ಕಟ್ಟಿಸಿ, ಅದರ ಮುಂಭಾಗದಲ್ಲಿ ಇವರ ಪ್ರತಿಮೆಯನ್ನು ಇಟ್ಟಿರುತ್ತಾರೆ. ಆಳುವ ಮಹಾಸ್ವಾಮಿಯವರ ಮಹಾಮಾತೃಶ್ರೀಯವರಾದ ಶ್ರೀ ವಾಣೀವಿಲಾಸ ಸನ್ನಿಧಾನದವರು ಇವರಿಗೆ 'ರಾಜ್ಯಧುರಂಧರ' ಎಂಬ ಬಿರುದನ್ನು ದಯೆಪಾಲಿಸಿದರು. ಸಾರ್ವಭೌಮ ಸರಕಾರದವರೂ ಇವರಿಗೆ ಕೆ. ಸಿ. ಎಸ್. ಐ. ಎಂಬ ಪ್ರಶಸ್ತಿಯನ್ನು ಕೊಟ್ಟರು.

ರಾಜ್ಯಧುರಂಧರ ಸರ್ ಕೆ. ಶೇಷಾದ್ರಿ ಅಯ್ಯರ್, ಕೆ. ಸಿ. ಎಸ್. ಐ., ಅವರು ೧೯೦೧ ರಲ್ಲಿ ದಿವಾನ್ ಪದವಿಯಿಂದ ನಿವೃತ್ತರಾಗಲು, ಆಗ ಪ್ರಥಮ ಸಚಿವರಾಗಿದ್ದ ಸರ್. ಪಿ. ಎನ್. ಕೃಷ್ಣಮೂರ್ತಿಯವರು ಆ ಪದವಿಗೆ ನೇಮಿಸಲ್ಪಟ್ಟರು. ಇವರು ದಿವಾನ್ ಪೂರ್ಣಯ್ಯನವರ ಸಂತತಿಯವರು. ೧೯೦೨ರಲ್ಲಿ ಆಳುವ ಮಹಾಸ್ವಾಮಿಯವರು ಸ್ವತಃ ರಾಜ್ಯಭಾರವನ್ನು ವಹಿಸಿದರು. ಆದುದರಿಂದ ಸರ್. ಪಿ. ಎನ್. ಕೃಷ್ಣಮೂರ್ತಿಗಳು ಇವರಿಗೆ ಮೊದಲನೆಯ ದಿವಾನರಾದರು.

ಇವರ ತರುವಾಯ ೧೯೦೬ರಲ್ಲಿ ಶ್ರೀಯುತ ವಿ. ಪಿ. ಮಾಧವರಾಯರು ದಿವಾನರಾದರು. ಇವರ ಕಾಲದಲ್ಲಿ, ಆಗ ಪ್ರಿನ್ಸ್ ಆಫ್ ವೇಲ್ಸ್ ಆಗಿದ್ದು ಮುಂದೆ ಬ್ರಿಟಿಷ್ ಚಕ್ರವರ್ತಿಗಳಾದ ಐದನೆಯ ಜಾರ್ಜ್‌ರವರು ಮೈಸೂರು ಸಂಸ್ಥಾನಕ್ಕೆ ದಯೆಮಾಡಿಸಿದ್ದರು. ೧೯೦೭ರಲ್ಲಿ ಈ ಸಂಸ್ಥಾನದಲ್ಲಿ ನ್ಯಾಯ ವಿಧಾಯಕಸಭೆ ಸ್ಥಾಪಿತವಾಯಿತು. ಶ್ರೀಯುತ ಮಾಧವರಾಯರು* ಮೂರು ವರ್ಷಗಳಕಾಲ ದಿವಾನರಾಗಿದ್ದರು.

ಶ್ರೀ ವಿ. ಪಿ. ಮಾಧವರಾಯರ ತರುವಾಯ ಶ್ರೀಯುತ ಟಿ. ಆನಂದರಾಯರು ದಿವಾನ್ ಪದವಿಗೆ ಬಂದರು. ಇವರು ತಿರುವಾಂಕೂರು ಮತ್ತು ಬರೋಡಾ ಸಂಸ್ಥಾನಗಳ ದಿವಾನರಾಗಿದ್ದ ರಾಜ ಸರ್ ಟಿ. ಮಾಧವರಾಯರ ಮಕ್ಕಳು. ಇವರು ದೇಶದ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವುದಕ್ಕಾಗಿ 'ಅರ್ಥಸಾಧಕಸಭೆ'ಯನ್ನು ೧೯೧೧ರಲ್ಲಿ ಏರ್ಪಡಿಸಿದರು. ಇವರ ಕಾಲದಲ್ಲಿ ಕೃಷ್ಣರಾಜಸಾಗರ ಜಲಾಶಯದ ಏರ್ಪಾಡುಗಳು ಪ್ರಾರಂಭವಾದುವು. ಬೆಂಗಳೂರಿನಿಂದ ಚಿಕ್ಕಬಳ್ಳಾಪುರ ಕೋಲಾರಗಳ ಮಾರ್ಗವಾಗಿ ಬೌರಿಂಗ್‌ಪೇಟೆಗೆ ಹೊಸದಾಗಿ ರೈಲುಮಾರ್ಗವು ಹಾಕಲ್ಪಟ್ಟಿತು. ಈವರೆಗೆ ಬೆಂಗಳೂರು ದಂಡಿನ ವರ್ಷಾದಾಯದಲ್ಲಿ ಉಳಿದ ಹಣವು ಪ್ರತಿರ್ಷವೂ ಇಂಡಿಯಸರಕಾರಕ್ಕೆ ಸೇರುತ್ತಿತ್ತು. ಇಲ್ಲಿಂದ ಮುಂದಕ್ಕೆ ಈ ಹಣವು ಮೈಸೂರು ಸಂಸ್ಥಾನಕ್ಕೆ ಸೇರತಕ್ಕುದೆಂದು ತೀರ್ಮಾನವಾಯಿತು. ಇವರ ಕಾಲದಲ್ಲಿ ಅಂದರೆ ೧೯೧೧ರಲ್ಲಿ ದೆಹಲಿಯ ದರಬಾರು ನಡೆಯಿತು. ಈ ಮಹೋತ್ಸವಕ್ಕೆ ಐದನೆಯ ಜಾರ್ಜ್‌ಚಕ್ರವರ್ತಿಯವರೇ ಸತೀದ್ವಿತೀಯರಾಗಿ ದೆಹಲಿಗೆ ದಯೆಮಾಡಿಸಿದ್ದರು.

ಶ್ರೀಯುತ ಆನಂದರಾಯರು ಮೂರುರ್ಷಗಳಕಾಲ ದಿವಾನರಾಗಿದ್ದು ೧೯೧೨ರಲ್ಲಿ ಈ ಪದವಿಯಿಂದ ನಿವೃತ್ತರಾದರು. ಇವರು ಮಾಡಿದ ದೇಶ ಸೇವೆಗಾಗಿ ಆಳುವ ಮಹಾಸ್ವಾಮಿಯವರು ಇವರಿಗೆ 'ಪ್ರಧಾನ ಶಿರೋಮಣಿ' ಎಂಬ ಬಿರುದನ್ನು ದಯೆಪಾಲಿಸಿ, ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಈ ಕಾಲದಲ್ಲಿ ಮೈಸೂರು ಸಂಸ್ಥಾನದ ಚೀಫ್ ಇಂಜನಿಯರಾಗಿದ್ದ ಶ್ರೀಯುತ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಶ್ರೀ ಆನಂದರಾಯರ ತರುವಾಯ ೧೯೧೨ರಲ್ಲಿ ದಿವಾನರಾದರು. ಇವರು ಮೈಸೂರು ದೇಶೀಯರು. ಇವರಿಗೆ ತಮ್ಮ ದೇಶದಮೇಲೆ ಅಸಾಧಾರಣ ಪ್ರೇಮ. ಮಾತೃಭೂಮಿಯಾದ ಮೈಸೂರು ದೇಶವು ಸರ್ವತೋಮುಖವಾದ ಅಭಿವೃದ್ಧಿಯನ್ನು ಪಡೆಯಬೇಕೆಂಬುದೇ ಇವರ ದೃಢಸಂಕಲ್ಪ. ಇವರ ಕಾಲದಲ್ಲಿ ಪ್ರಪಂಚದಲ್ಲೇ ಹೆಸರುವಾಸಿಯಾದ ಕೃಷ್ಣರಾಜಸಾಗರವೂ, ಮೈಸೂರುಬ್ಯಾಂಕೂ, ಛೇಂಬರ್ ಆಫ್ ಕಾಮರ್ಸ್ ಎಂಬ ವಾಣಿಜ್ಯಸಂಘವೂ, ವಿಶ್ವವಿದ್ಯಾಪೀಠವೂ, ಭದ್ರಾವತಿಯ ಕಬ್ಬಿಣದ ಕಾರ್ಖಾನೆಯೂ ಮತ್ತು ಗಂಧದೆಣ್ಣೆಯ ಕಾರ್ಖಾನೆಯೂ, ಸಾರ್ವಜನಿಕ ವಾಚನಾಲಯಗಳೂ ಹೊಸದಾಗಿ ಏರ್ಪಾಡಾದುವು.

---

*ಇವರು ತಿರುವಾಂಕೂರು ಮತ್ತು ಬರೋಡಾ ಸಂಸ್ಥಾನಗಳ ದಿವಾನ್ ಪದವಿಯನ್ನು ಅಲಂಕರಿಸಿದ್ದು ೧೯೩೪ರಲ್ಲಿ ದಿವಂಗತರಾದರು.

ಶ್ರೀಯುತ ಸರ್. ಎಂ. ವಿಶ್ವೇಶ್ವರಯ್ಯನವರು ಏಳುವರ್ಷಗಳಕಾಲ ದಿವಾನರಾಗಿದ್ದರು. ಇವರು ೧೯೧೯ರಲ್ಲಿ ಈ ಪದವಿಯಿಂದ ನಿವೃತ್ತರಾಗಲು, ಪ್ರಥಮ ಸಚಿವರಾಗಿದ್ದ ಶ್ರೀಯುತ ಸರದಾರ್ ಎಂ. ಕಾಂತರಾಜ ಅರಸಿನವರು ದಿವಾನರಾಗಿ ನೇಮಿಸಲ್ಪಟ್ಟರು. ಇವರ ಕಾಲದಲ್ಲಿ ಮಾಧ್ಯಮಿಕ ಪಾಠಶಾಲೆಗಳಲ್ಲಿ ವಸೂಲುಮಾಡುತ್ತಿದ್ದ ಶುಲ್ಕ (ಫೀ)ವನ್ನು ತೆಗೆದುಹಾಕಿದುದಲ್ಲದೆ ಹಿಂದುಳಿದ ಪಂಗಡಗಳ ವಿದ್ಯಾರ್ಥಿಗಳಿಗೆ ವೇತನವನ್ನೂ, ಪುಸ್ತಕ, ಬಟ್ಟೆ ಮೊದಲಾದುವುಗಳನ್ನೂ ಕೊಡುವಂತೆ ಏರ್ಪಡಿಸಿ, ಸಂಸ್ಥಾನದ ಪ್ರಜೆಗಳ ವಿದ್ಯಾಭಿವೃದ್ಧಿಗೆ ವಿಶೇಷ ಸೌಕರ್ಯವನ್ನು ಕಲ್ಪಿಸಿಕೊಟ್ಟರು. ಇವರು ಮೂರುವರ್ಷಗಳು ದಿವಾನರಾಗಿದ್ದರು.

ಇವರ ತರುವಾಯ ಶ್ರೀ ಸರ್ ಆಲ್ಬಿಯನ್ ರಾಜಕುಮಾರ್ ಬಾನರ್ಜಿಯವರು ೧೯೨೨ರಲ್ಲಿ ದಿವಾನ್ ಪದವಿಯನ್ನು ಪಡೆದರು. ಇವರು ದಿವಾನರಾಗಿದ್ದ ನಾಲ್ಕುವರ್ಷಗಳಕಾಲದಲ್ಲಿ ಪ್ರಜಾಪ್ರತಿನಿಧಿಸಭೆ ನ್ಯಾಯವಿಧಾಯಕಸಭೆಗಳಲ್ಲಿ ಅನೇಕ ಬದಲಾವಣೆಗಳಾದವು. ಇವರ ಅನಂತರ ೧೯೨೬ನೆಯ ಇಸವಿ ಮೇ ತಿಂಗಳಲ್ಲಿ ಶ್ರೀಯುತ ಅಮೀನ್-ಉಲ್ ಮುಲ್ಕ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ದಿವಾನ್ ಪದವಿಯನ್ನು ಅಲಂಕರಿಸಿದರು.

ಶ್ರೀ ಮಿರ್ಜಾ ಮಹಮದ್ ಇಸ್ಮಾಯಿಲ್ ಅವರು ಬಾಲ್ಯದಲ್ಲಿ ಆಳುವ ಮಹಾಸ್ವಾಮಿಯವರ ಸಹಪಾಠಿಗಳಾಗಿದ್ದರೆಂದು ಹಿಂದೆಯೇ ಹೇಳಿದೆ. ಸರ್ ಎಂ. ವಿಶ್ವೇಶ್ವರಯ್ಯನವರಂತೆಯೇ ಇವರೂ ಅತಿಶಯವಾದ ರಾಜಭಕ್ತಿಯುಳ್ಳವರು; ದೇಶಾಭಿಮಾನಿಗಳಲ್ಲಿ ಅಗ್ರಗಣ್ಯರು. ಇವರ ಕಾರ್ಯದಕ್ಷತೆಯನ್ನೂ, ಸಂಸ್ಥಾನದ ಪ್ರಜೆಗಳಲ್ಲಿರುವ ಪ್ರೇಮಾತಿಶಯವನ್ನೂ, ಸಂಸ್ಥಾನದ ಅಭಿವೃದ್ಧಿಗಾಗಿ ಇವರು ರಾತ್ರಿ ಹಗಲೂ ಒಂದೇ ಸಮವಾಗಿ ದುಡಿಯುತ್ತಿರುವುದನ್ನೂ ನೋಡಿ ತಲೆದೂಗದವರೇ ಇಲ್ಲ. ಇವರು ದಿವಾನ್ ಪದವಿಗೆ ಬಂದಮೇಲಂತೂ ಸಂಸ್ಥಾನದಲ್ಲಿ ಸರ್ವತೋಮುಖವಾದ ಅಭಿವೃದ್ಧಿಯು ದಿನದಿನಕ್ಕೆ ಹೆಚ್ಚುತ್ತಿದೆ.

ಶ್ರೀ ಮಿರ್ಜಾ ಎಂ. ಇಸ್ಮಾಯಿಲ್ ಅವರು ಬೆಂಗಳೂರು ಮೈಸೂರು ಮೊದಲಾದ ಪಟ್ಟಣಗಳನ್ನು ಸುಂದರವಾದ ಬೀದಿಗಳಿಂದಲೂ, ಚಿತ್ರದಂತಿರುವ ಚೌಕಗಳು ಮತ್ತು ವೃತ್ತಗಳಿಂದಲೂ, ಉದ್ಯಾನವನಗಳಿಂದಲೂ, ಹೊಸ ಹೊಸ ಕಟ್ಟಡಗಳಿಂದಲೂ ಅಲಂಕರಿಸಿರುವರು. ಪಟ್ಟಣಗಳನ್ನು ಅಂದಗೊಳಿಸುವುದರಲ್ಲಿಯೂ, ಅವುಗಳ ಆರೋಗ್ಯ ಜಲವಸತಿ ಮೊದಲಾದುವನ್ನು ಹೆಚ್ಚಿಸುವುದರಲ್ಲಿಯೂ, ವಿದ್ಯುಚ್ಛಕ್ತಿಯನ್ನು ಹಳ್ಳಿಗಳಿಗೂ ಸಹ ಒದಗಿಸುವುದರಲ್ಲಿಯೂ ಇವರು ವಿಶೇಷ ಆಸಕ್ತಿಯನ್ನು ವಹಿಸಿರುವರು. ಇವರ ಕಾಲದಲ್ಲಿ ಮಂಡ್ಯದ ಸಕ್ಕರೆಯ ಕಾರ್ಖಾನೆಯೂ*, ಚನ್ನಪಟ್ಟಣದ ರೇಷ್ಮೆಯ

---

ಈ ಕಾರ್ಖಾನೆಯು ಇಂಡಿಯದಲ್ಲೆಲ್ಲ ದೊಡ್ಡ ಕಾರ್ಖಾನೆಯಾಗಿದೆ. ಇಲ್ಲಿ ವರ್ಷ ಒಂದಕ್ಕೆ ೨೦,೦೦೦ ಟನ್ನುಗಳಷ್ಟು ಸಕ್ಕರೆ ಸಿದ್ಧವಾಗುತ್ತಿದೆ. ಈ ಕಾರ್ಖಾನೆಯನ್ನು ಇನ್ನೂ ಅಭಿವೃದ್ಧಿಪಡಿಸಿ, ವರ್ಷಕ್ಕೆ ೪೦,೦೦೦ ಟನ್ನುಗಳಷ್ಟು ಸಕ್ಕರೆಯನ್ನು ಉತ್ಪತ್ತಿ ಮಾಡಬೇಕೆಂಬ ಯೋಚನೆಯಿದೆ.

ಕಾರ್ಖಾನೆಯೂ, ಭದ್ರಾವತಿಯ ಕಾಗದದ ಕಾರ್ಖಾನೆಯೂ ಏರ್ಪಾಡಾಗಿ, ಪ್ರಜೆಗಳಿಗೂ ದೇಶಕ್ಕೂ ಉಪಕಾರವಾಗಿರುವುದು.

ಇವರು ಸಂಸ್ಥಾನದ ನಾನಾ ಭಾಗಗಳಲ್ಲಿ ಅನೇಕ ಸಲ ಸಂಚಾರ ಹೊರಟು, ಪ್ರಜೆಗಳ ಕಷ್ಟ ಸುಖಗಳನ್ನು ಪ್ರತ್ಯಕ್ಷವಾಗಿ ಕಂಡುಕೊಂಡು, ಧನಿಕರಿಂದ ದೇಶಸೇವೆಯನ್ನೂ, ಧರ್ಮದ ಕಾರ್ಯಗಳನ್ನೂ ಮಾಡಿಸುತ್ತ, ಮನಮುಟ್ಟುವ ತಮ್ಮ ಗಂಭೀರಭಾಷಣಗಳಿಂದ, ಸಂಸ್ಥಾನದ ಪ್ರತಿಯೊಂದು ಹಳ್ಳಿಯವರೂ ತಾವಾಗಿ ಮುಂದೆ ಬಂದು ಗ್ರಾಮಾಭಿವೃದ್ಧಿ ಕಾರ್ಯಗಳನ್ನೂ, ದೇಶಸೇವೆ ಮತ್ತು ಧರ್ಮಕಾರ್ಯಗಳನ್ನೂ ಕೈಕೊಳ್ಳುವಂತೆ ಹುರಿದುಂಬಿಸುತ್ತಿರುವರು. ಇದರ ಫಲವಾಗಿ ಸಂಸ್ಥಾನದಲ್ಲಿ ಶಿಶು ಸಂರಕ್ಷಣಾಲಯಗಳೂ, ಹೆರಿಗೆಯ ಆಸ್ಪತ್ರೆಗಳೂ, ಮಕ್ಕಳ ಆಸ್ಪತ್ರೆಗಳೂ, ಪಶುವೈದ್ಯಶಾಲೆಗಳೂ, ಪಾಠಶಾಲೆಗಳೂ, ಧರ್ಮಸತ್ರಗಳೂ, ವಿದ್ಯಾರ್ಥಿನಿಲಯಗಳೂ, ಇತರ ಬಗೆಯ ಹೊಸಹೊಸ ಧರ್ಮಕಾರ್ಯಗಳೂ ದಿನದಿನಕ್ಕೆ ಹೆಚ್ಚುತ್ತಿರುವುವು. ಆಸ್ಪತ್ರೆಗಳಿಗಾಗಿಯೇ ನಮ್ಮ ಸಂಸ್ಥಾನದಲ್ಲಿ ಕಳೆದ ಹತ್ತುವರ್ಷಗಳ ಅವಧಿಯಲ್ಲಿ ಅನೇಕ ಮಹನೀಯರು ಹನ್ನೆರಡೂವರೆ ಲಕ್ಷ ರೂಪಾಯಿಗಳಿಗಿಂತ ಹೆಚ್ಚಾಗಿ ದ್ರವ್ಯವನ್ನು ದಾನ ಮಾಡಿರುತ್ತಾರೆ. ಪ್ರಜೆಗಳಲ್ಲಿ ದೇಶಾಭಿಮಾನ, ದೇಶಸೇವಾಸಕ್ತಿ, ರಾಜಭಕ್ತಿ ಮೊದಲಾದ ಸದ್ಗುಣಗಳು ಇವರ ಕಾಲದಲ್ಲಿ ಬಹಳವಾಗಿ ಪ್ರಕಾಶಕ್ಕೆ ಬಂದಿವೆ.

ಇಂಡಿಯದ ವೈಸರಾಯರಾಗಿದ್ದ ಲಾರ್ಡ್ ಅರ್ವಿನ್ ಅವರು ತಮ್ಮಪತ್ನಿ ಲೇಡಿ ಅರ್ವಿನ್ ಅವರೊಂದಿಗೆ ಪದ್ಧತಿಯ ಮೇರೆಗೆ, ಮೈಸೂರು ಸಂಸ್ಥಾನಕ್ಕೆ ೧೯೨೭ರಲ್ಲಿ ದಯೆಮಾಡಿಸಿದ್ದರು. ಇವರು ಮೈಸೂರಿನ ರಾಜ್ಯಭಾರವು ಕೇವಲ ವಿಚಕ್ಷಣೆಯಿಂದ ನಡೆಯುತ್ತಿರುವುದನ್ನು ನೋಡಿ, ಮೈಸೂರು ಸರಕಾರದವರು ಸಾರ್ವಭೌಮ ಸರಕಾರಕ್ಕೆ ಕೊಡುತ್ತಿದ್ದ ಪೊಗದಿಯಲ್ಲಿ ಹತ್ತೂವರೆಲಕ್ಷ ರೂಪಾಯಿಗಳನ್ನು ಬಿಟ್ಟುಕೊಟ್ಟರು.

ಇದೇ ವರ್ಷದಲ್ಲಿ ಶ್ರೀಮನ್ಮಹಾರಾಜರವರ ಇಪ್ಪತ್ತೈದುವರ್ಷಗಳ ರಾಜ್ಯಭಾರದ ರಜತಮಹೋತ್ಸವವು (ಸಿಲ್ವರ್ ಜ್ಯೂಬಿಲಿ) ನಡೆಯಿತು. ಹೀಗೆ ಪೊಗದಿಯಲ್ಲುಂಟಾದ ಆದಾಯವೂ, ಶ್ರೀಮನ್ಮಹಾರಾಜರವರ ರಜತ ಮಹೋತ್ಸವವೂ, ಶ್ರೀ ಮಿರ್ಜಾ ಎಂ. ಇಸ್ಮಾಯಿಲ್ ಅವರ ದಿವಾನ್ ಗಿರಿಯನ್ನು ಮೈಸೂರಿನ ಪ್ರಜೆಗಳು ಶಾಶ್ವತವಾಗಿ ಜ್ಞಾಪಕವಿಡುವಂತೆ ಮಾಡಿದೆ.

ಲಾರ್ಡ್‌ಅರ್ವಿನ್ ಅವರು ಪತ್ನೀಪರಿವಾರ ಸಮೇತರಾಗಿ ೧೯೨೯ನೆಯ ನವೆಂಬರಿನಲ್ಲಿ, ಎರಡನೆಯ ಸಲ ಮೈಸೂರಿಗೆ ದಯೆಮಾಡಿಸಿ ಗೇರುಸೊಪ್ಪೆ ಜಲಪಾತವನ್ನು ನೋಡಿಕೊಂಡು, ಕೆಡ್ಡಾದಲ್ಲಿ ಆನೆಗಳ ಷಿಕಾರಿಯನ್ನು ಮಾಡಿದರು. ಇವರು ಎರಡುಸಲ ಬಂದಾಗಲೂ, ಮೈಸೂರಿನ ಪ್ರಜೆಗಳು ಶ್ರೀಮನ್ಮಹಾರಾಜರವರಲ್ಲಿಯೂ, ಬ್ರಿಟಿಷ್ ಚಕ್ರವರ್ತಿ ಸಾರ್ವಭೌಮರಲ್ಲಿಯೂ ಅಕೃತ್ರಿಮವಾದ ರಾಜಭಕ್ತಿಯನ್ನಿಟ್ಟುಕೊಂಡಿರುವುದನ್ನು ನೋಡಿ ಆನಂದಪಟ್ಟರು.

ನಮ್ಮ ದಿವಾನರವರಿಗೆ ೧೯೩೧ನೆಯ ಪ್ರಥಮ ದಿನ ಸಾಮ್ರಾಜ್ಯ ಸರಕಾರದವರು 'ಸರ್' ಎಂಬ ಬಿರುದನ್ನು ದಯೆಪಾಲಿಸಿದರು. ದೇಶಾಭಿವೃದ್ಧಿಗಾಗಿಯೂ, ಪ್ರಜಾಕ್ಷೇಮಕ್ಕಾಗಿಯೂ, ಅಹೋರಾತ್ರಿಯಲ್ಲಿಯೂ ಶ್ರಮಿಸುತ್ತಿರುವ ಅಮೀರ್-ಉಲ್-ಮುಲ್ಕ್, ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ. ಟಿ., ಸಿ. ಐ. ಇ., ಓ. ಬಿ.ಇ., ಅವರ ಕಾರ್ಯದಕ್ಷತೆಯನ್ನು ನೋಡುತ್ತಿರುವ ಸಾರ್ವಭೌಮ ಸರಕಾರದವರು ಪುನಃ ೧೯೩೬ನೆಯ ವರ್ಷ ಆರಂಭದ ದಿನ ಇವರಿಗೆ ಕೆ. ಸಿ. ಐ.ಇ. ಎಂಬ ಪ್ರಶಸ್ತಿಯನ್ನು ಕೊಟ್ಟು ತಮ್ಮ ಮೆಚ್ಚುಗೆಯನ್ನು ಪ್ರಕಾಶಪಡಿಸಿದರು.

ಜಾವಾ ದ್ವೀಪದಲ್ಲಿರುವ ಬ್ಯಾಂಡಿಯಾಂಗ್ ನಗರದಲ್ಲಿ ೧೯೩೭ನೆಯ ಆಗಸ್ಟ್ ತಿಂಗಳಲ್ಲಿ ಅಂತರರಾಷ್ಟ್ರೀಯ ಗ್ರಾಮಾರೋಗ್ಯ ಸಮ್ಮೇಳನವು ನಡೆಯಿತು. ಈ ಸಮ್ಮೇಳನಕ್ಕೆ ಜಗತ್ತಿನ ನಾನಾ ಸರಕಾರಗಳ ಪ್ರತಿನಿಧಿಗಳೂ ಬಂದಿದ್ದರು. ಭಾರತದ ಪ್ರತಿನಿಧಿಗಳ ನಾಯಕರಾಗಿ ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಹೋಗಿ ಸಮ್ಮೇಳನದಲ್ಲಿ ಭಾಗವಹಿಸಿ, ತಮ್ಮ ಅಮೋಘವಾದ ಭಾಷಣಗಳಿಂದ ಮೈಸೂರಿಗೆ ಮಾತ್ರವಲ್ಲದೆ, ವಿಶಾಲ ಭಾರತಕ್ಕೇ ಕೀರ್ತಿ ತಂದಿದ್ದಾರೆ.

ಇಂತಹ ಸಚಿವ ಶ್ರೇಷ್ಠರ ಕಾರ್ಯದಕ್ಷತೆ, ಅಕಳಂಕವಾದ ರಾಜಭಕ್ತಿ, ನಿಶ್ಚಲವಾದ ಪ್ರಜಾವಾತ್ಸಲ್ಯ, ದೇಶಸೇವಾಕುತೂಲಹಲ, ಇವುಗಳನ್ನು ಪ್ರತ್ಯಕ್ಷವಾಗಿ ಕಂಡ ಮಹಾಸ್ವಾಮಿಯವರು ಇವರ ದಿವಾನ್‌ಗಿರಿಯ ಅವಧಿಯನ್ನು ೧೯೩೮ನೆಯ ಜನವರಿಯಿಂದ ಐದುವರ್ಷಗಳ ಕಾಲ ಹೆಚ್ಚಿಸಿರುವರು. ಐದುವರ್ಷಗಳಲ್ಲಿ ಮೈಸೂರು ದೇಶವು ಸರ್ವತೋಮುಖವಾಗಿ ಮತ್ತಷ್ಟು ಮುಂದುವರಿಯುವುದಲ್ಲದೆ, ಇದರ ಧವಳಕೀರ್ತಿಯು ಆರು ಖಂಡಗಳಲ್ಲಿಯೂ ಅಖಂಡವಾದ ಜ್ಯೋತಿಯಂತೆ ಬೆಳಗುವುದರಲ್ಲಿ ಸಂದೇಹವಿಲ್ಲ.

ಹೀಗೆ ಶ್ರೀಮನ್ಮಹಾರಾಜರವರು ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರ ದಿವಾನ್‌ಗಿರಿಯ ಅವಧಿಯನ್ನು ಇನ್ನೂ ಐದು ವರ್ಷಗಳವರೆಗೆ ಕೃಪಾಪೂರ್ವಕವಾಗಿ ಹೆಚ್ಚಿಸುವುದರ ಮೂಲಕ ತಮ್ಮ ಮೆಚ್ಚುಗೆಯನ್ನೂ, ವಿಶ್ವಾಸ ಭರವಸೆಗಳನ್ನೂ ಅಮೋಘವಾದ ರೀತಿಯಲ್ಲಿ ಪ್ರಕಾಶಪಡಿಸಿದುದರಿಂದ, ಸಂಸ್ಥಾನದ ಪ್ರಜೆಗಳಿಗುಂಟಾದ ಆನಂದಾತಿಶಯವನ್ನು ತೋರ್ಪಡಿಸುವುದಕ್ಕಾಗಿ, ಹಲವು ಕೋಮಿನವರೂ ಸಂಸ್ಥೆಗಳವರೂ ಸತ್ಕಾರಕೂಟಗಳನ್ನೇರ್ಪಡಿಸಿ, ದಿವಾನರನ್ನು ವಿಶ್ವಾಸಪೂರ್ವಕವಾಗಿ ಬರಮಾಡಿಕೊಂಡು, ಮನಃ ಪೂರ್ವಕವಾದ ಮತ್ತು ಗೌರವಯುತವಾದ ಅಭಿನಂದನೆಗಳನ್ನು ಸಲ್ಲಿಸಿದರು. ಇಂತಹ ಸತ್ಕಾರಕೂಟಗಳಲ್ಲಿ, ಬೆಂಗಳೂರು ನಗರದ ವೈದಿಕ ವಿದ್ವಾಂಸರು ೧೯೩೮ನೆಯ ಜನವರಿ ೧೫ನೆಯ ತಾರೀಖಿನ ದಿನ, ಕೋಟೆಯಲ್ಲಿರುವ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಏರ್ಪಡಿಸಿದ ಕೂಟವೂ, ಫೆಬ್ರವರಿ ೧೯ನೆಯ ತಾರೀಖು ಬೆಂಗಳೂರು ಲಾಲ್‌ಬಾಗಿನಲ್ಲಿ ನಡೆದ ಸಾರ್ವಜನಿಕ ಸತ್ಕಾರವೂ ಹೆಚ್ಚು ವೈಭವದಿಂದಲೂ ವಿಜೃಂಭಣೆಯಿಂದಲೂ ನಡೆದವು.

ಸಂಸ್ಕೃತ ಕಾಲೇಜಿನಲ್ಲಿ ನಡೆದ ಸಮಾರಂಭ ಕಾಲದಲ್ಲಿ ದಿವಾನರವರು ಮಾಡಿದ

ಭಾಷಣದಲ್ಲಿ, ಮೈಸೂರು ಸಂಸ್ಥಾನವು ಪೂರ್ವದಿಂದಲೂ ವೈದಿಕ ವಿದ್ಯೆಗೂ ಸಂಸ್ಕೃತಿಗೂ ನೆಲೆಯೆನಿಸಿ ಪ್ರಖ್ಯಾತವಾಗಿರುವ ಅಂಶವನ್ನು ಸೂಚಿಸಿದರು. ಅನಂತರ ಬೇರೆಬೇರೆ ಮತಗಳ ಅನುಯಾಯಿಗಳೆಲ್ಲರೂ ನಮ್ಮ ಸಂಸ್ಥಾನದಲ್ಲಿ ಸಾಮರಸ್ಯದಿಂದಲೂ ಸೌಹಾರ್ದದಿಂದಲೂ ಇರುವ ಅಸಾಧಾರಣವಾದ ಸನ್ನಿವೇಶವು, ಇಲ್ಲಿ ಕಂಡುಬರುವ ಪರಮತ ಸಹಿಷ್ಣುತೆಯನ್ನು ಸೂಚಿಸುವುದರಿಂದ ಅದೊಂದು ಹೆಮ್ಮೆಯ ಸಂಗತಿಯೆಂದು ಹೇಳಿ, ತಾವು ವೈದಿಕ ವಿದ್ವಾಂಸ ಪಂಗಡದವರ ಸನ್ಮಿತ್ರರೆಂದೂ, ಅವರ ಹಿತಚಿಂತಕರೆಂದೂ, ಅವರ ಯೋಗಕ್ಷೇಮವನ್ನು ಹಾರೈಸತಕ್ಕವರೆಂದೂ ನಂಬಿಕೆಯನ್ನಿಟ್ಟು, ಅವರು ತಮ್ಮಲ್ಲಿ ಪ್ರೀತಿವಿಶ್ವಾಸಗಳಿಂದ ವರ್ತಿಸಿರುವುದನ್ನು ಕೊಂಡಾಡಿದರು. ಇವರು ತಮ್ಮ ಭಾಷಣದಲ್ಲಿ, "ನಾನು ಸೇವಿಸುತ್ತಿರುವುದು ಹಿಂದು ಸಂಸ್ಥಾನವಾದ ಮೈಸೂರು ದೇಶ. ನಾನು ಓಲೈಸುತ್ತಿರುವುದು, ಸಂಸ್ಕೃತಿ ನಾಗರಿಕತೆಗಳ ಉತ್ತಮೋತ್ತಮವಾದ ಉದಾತ್ತ ಲಕ್ಷಣಗಳೆಲ್ಲ ಹಿಂದು ಮೂರ್ತೀಭವಿಸಿದಂತಿರುವ ನಮ್ಮ ಶ್ರೀಮನ್ಮಹಾರಾಜರವರನ್ನು. ಹಿಂದುಗಳಲ್ಲಿ ಮಹಾಸ್ವಾಮಿಯವರಿಗಿಂತ ಶ್ರೇಷ್ಠರಾದ ಧರ್ಮಾತ್ಮರು ಮತ್ತೊಬ್ಬರಿರುವುದನ್ನು ಊಹಿಸಿಕೊಳ್ಳುವುದು ಕೂಡ ಕಷ್ಟವೇ ಸರಿ. ಆದಕಾರಣ, ನಿಮ್ಮ ಮತದ ಮತ್ತು ನಿಮ್ಮ ಸಂಸ್ಕೃತಿಯ ಸೇವೆಯಲ್ಲಿ ನಾನು ಪೂರ್ಣಮನಸ್ಸಿನಿಂದ ನಿಮ್ಮೊಡನೆ ಸಹಕರಿಸುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಅದು ಸಹಜವಾಗಿಯೇ ಇದೆ. ಮಹಾಸ್ವಾಮಿಯವರಿಗಾಗಲಿ, ಅವರ ಪ್ರಜೆಗಳಾದ ನನ್ನ ದೇಶಬಾಂಧವರಲ್ಲಿ ಬಹುಭಾಗದವರಿಗಾಗಲಿ, ಸಮ್ಮತವಾಗಿಲ್ಲ ದಿರುವು ದನ್ನು ನಾನು ನುಡಿದರೆ ಅಥವಾ ಮಾಡಿದರೆ ಅದೀಗ ವಿಚಿತ್ರವೆನಿಸೀತು. ತನ್ನ ಮತಬಾಂಧವರಿಗಿಂತ ಅನ್ಯಮತಬಾಂಧವರ ಸೇವೆಯನ್ನವನು ಅಧಿಕವಾಗಿ ಸಲ್ಲಿಸುವನೋ ಅವನೇ ಭಗವಂತನನ್ನು ಹೆಚ್ಚಾಗಿ ಮೆಚ್ಚಿಸತಕ್ಕವನೆಂಬುದು, ನನಗಿರುವ ಅಚಲವಾದ ನಂಬಿಕೆಯೆಂದು ವಿನೀತಭಾವದಿಂದ ಹೃತ್ಪೂರ್ವಕವಾಗಿ ನಾನು ಸೂಚಿಸಲಿಚ್ಛಿಸುವೆನು. ಇದು ವಿರುದ್ಧ ಪ್ರಕೃತಿಯುಳ್ಳ ವಿಲಕ್ಷಣಭಾವನೆಯೆಂದು ಕೆಲವರಿಗೆ ತೋರಬಹುದು. ಆದರೆ ವಸ್ತುಸ್ಥಿತಿಯನ್ನು ವಿಚಾರಮಾಡಿ ನೋಡಿದರೆ, ನಾನು ಸೂಚಿಸಿರುವ ಅಂಶವು ನಿಜವೆಂಬುದು ಖಚಿತವಾಗಿ ಗೊತ್ತಾಗುವುದು. ಏಕೆಂದರೆ, ಅನ್ಯ ಮತ ಸಹಿಷ್ಣುತೆಯ ಭಾವನೆಯು ಮಾತ್ರವೇ ಅಲ್ಲದೆ, ಅದಕ್ಕಿಂತಲೂ ಘನ ತರವಾದ ಕೆಲವು ಸದ್ಗುಣಗಳಿರಬೇಕಾ ದುದು ಆವಶ್ಯಕ. ಈ ವಿಚಾರದಲ್ಲಿ, ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ರವರ ಅಮೋಘವಾದ ಉದಾಹರಣೆಗಿಂತಲೂ ಹೆಚ್ಚಿನ ಸ್ಫೂರ್ತಿದಾಯಕವಾದ ಉದಾಹರಣೆಯು ಮತ್ತೊಂದಿಲ್ಲ. ಮಹಾಸ್ವಾಮಿಯವರು ಸಮಸ್ತ ಮತಗಳವರನ್ನೂ ಸಮಸ್ತ ಕೋಮುಗಳವರನ್ನೂ ಸಮಾನವಾಗಿ ಕಂಡು ಕೃಪೆಮಾಡುತ್ತಿದ್ದಾರೆ: ಪ್ರಜಾವತ್ಸಲರಾಗಿ ನಮ್ಮೆಲ್ಲರಲ್ಲಿಯೂ ಅತ್ಯಂತ ಪ್ರೀತಿಯನ್ನಿಟ್ಟುಕೊಂಡು ವಿವೇಕದಿಂದ ಪ್ರಭುತ್ವಮಾಡುತ್ತಿದ್ದಾರೆ. ಆದಕಾರಣ, ಅನ್ಯಮತೀಯರಲ್ಲಿ ಆದರ ತೋರಿಸಿ ಸಹಾಯಮಾಡುವ ಭಾಗದಲ್ಲಿ ಮಹಾಸ್ವಾಮಿಯವರ ಅಮೋಘವಾದ ಉದಾಹರಣೆಗಿಂತಲೂ ಹೆಚ್ಚಿನ ಸ್ಫೂರ್ತಿದಾಯಕ ವಾದ ಉದಾಹರಣೆಯು ಮತ್ತೊಂದಿಲ್ಲವೆಂಬುದು ನನಗಿರುವ ಅಚಲವಾದ ನಂಬಿಕೆ" ಎಂದು ಹೇಳಿ, ತಮಗಿರುವ ಹೃದಯವೈಶಾಲ್ಯವನ್ನೂ ಸರ್ವಜನಸಮದೃಷ್ಟಿಯನ್ನೂ ವ್ಯಕ್ತಗೊಳಿಸಿದರು.

ಲಾಲ್‌ಬಾಗಿನ ಆಲ್ಬರ್ಟ್ ವಿಕ್ಟರ್ ಹಾಲ್‌ನಲ್ಲಿ ನಡೆದ ಸಾರ್ವಜನಿಕ ಸತ್ಕಾರಕೂಟದಲ್ಲಿ ಬೆಂಗಳೂರು ನಿವಾಸಿಗಳು ಒಪ್ಪಿಸಿದ ಬಿನ್ನವತ್ತಳೆಗೆ ಪ್ರತ್ಯುತ್ತರವಾಗಿ ಮಾಡಿದ ಭಾಷಣದಲ್ಲಿ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ತಮ್ಮ ಜನ್ಮಭೂಮಿಯಾದ ಬೆಂಗಳೂರು ನಗರದ ವಿಚಾರವನ್ನೆತ್ತಿ, "ನಾನು ಹುಟ್ಟಿದುದು ಬೆಂಗಳೂರು ನಗರದಲ್ಲಿ. ನನ್ನ ವಿದ್ಯಾಭ್ಯಾಸವು ನಡೆದುದೂ ಬೆಂಗಳೂರು ನಗರದಲ್ಲಿ. ನನ್ನ ಆಟಪಾಟಗಳೂ, ವ್ಯವಹಾರಗಳೂ ನಡೆದುದೂ ಬೆಂಗಳೂರು ನಗರದಲ್ಲಿ. ಸರಕಾರದ ಹುದ್ದೆಯಲ್ಲಿದ್ದು ವ್ಯವಧಾನವೇ ಇಲ್ಲದಂತೆ ನನ್ನ ಕಾಲವನ್ನು ವಿನಿಯೋಗಿಸಿ ಕೆಲಸ ಮಾಡುತ್ತಾ, ನಾನು ವಾಸವಾಗಿರುವುದೂ ಬೆಂಗಳೂರು ನಗರದಲ್ಲಿ. ನನ್ನ ಒಲವೂ, ಒಕ್ಕಲುತನವೂ ನೆಲಸಿರುವುದೇ ನಮ್ಮ ಬೆಂಗಳೂರು ನಗರದಲ್ಲಿ" ಎಂದು ಮೊದಲಾಗಿ ಹೇಳಿ, ಬೆಂಗಳೂರಿನ ಪ್ರಾಶಸ್ತ್ಯವು ಇನ್ನೂ ಹೆಚ್ಚಿ, ಅದು ಇನ್ನೂ ಹಿರಿಮೆಯ ನಗರವಾಗಿ ವ್ಯಾಪಾರ ಕೈಗಾರಿಕೆಗಳಿಗೂ ಸಂಚಾರಕ್ಕೂ ಮತ್ತು ಸಂಸ್ಕೃತಿಗೂ ಒಟ್ಟು ಕನ್ನಡನಾಡಿಗೆ ಕೇಂದ್ರ ಸ್ಥಾನವಾಗುವುದೆಂಬುದು ತಾವು ಕಾಣುತ್ತಿರುವ ಸವಿಗನಸೆಂದೂ, ತಮ್ಮ ಮನಸ್ಸಿನಲ್ಲಿರುವ ಹಿರಿಯ ಬಯಕೆ ಎಂದೂ ತಿಳಿಸಿ, ಬೆಂಗಳೂರಿನ ಅಭ್ಯುದಯದಲ್ಲಿ ತಮಗಿರುವ ಅಸಾಧಾರಣವಾದ ಪ್ರೇಮವನ್ನು ಪ್ರಕಾಶಗೊಳಿಸಿದರು.

# ೭. ದೇಶಾಭಿವೃದ್ಧಿಯ ಕಾರ್ಯಗಳು

ಹಿಂದಿನ ಪ್ರಕರಣದಲ್ಲಿ ಹೇಳಿರುವಂತೆ ಒಬ್ಬೊಬ್ಬ ದಿವಾನರ ಕಾಲದಲ್ಲಿಯೂ ಮೈಸೂರು ದೇಶದಲ್ಲಿ ಸಂಪದಭಿವೃದ್ಧಿಗೆ ಸಾಧಕವಾದ ಕೆಲಸಗಳು ನಡೆದವು. ಸರ್‌ಎಂ. ವಿಶ್ವೇಶ್ವರಯ್ಯನವರ ಕಾಲದಿಂದ ಮೈಸೂರು ಸಂಸ್ಥಾನವು ಬಲುಮಟ್ಟಿಗೆ ಮುಂದುವರಿದು ಭಾರತವರ್ಷದಲ್ಲೆಲ್ಲಾ ಪ್ರಥಮ ಸ್ಥಾನವನ್ನು ಪಡೆದಿದೆ. ಶ್ರೀಮನ್ಮಹಾರಾಜರವರು ಪ್ರತಿಯೊಂದು ಇಲಾಖೆಯಲ್ಲಿಯೂ ಆವಶ್ಯಕವಾದ ತಿದ್ದುಪಡಿಗಳನ್ನೂ, ಸೌಕರ್ಯಗಳನ್ನೂ, ಉಂಟುಮಾಡಿ, ಮೈಸೂರು ಸಂಸ್ಥಾನವನ್ನು ಸರ್ವವಿಧಗಳಲ್ಲಿಯೂ ಆದರ್ಶಪ್ರಾಯವಾಗಿ ಮಾಡಿದ್ದಾರೆ.

ಆಳುವ ಮಹಾಸ್ವಾಮಿಯವರು ವ್ಯವಸಾಯ, ವಿದ್ಯಾಭ್ಯಾಸ, ಕೈಗಾರಿಕೆ ಮತ್ತು ವ್ಯಾಪಾರ ಇವುಗಳ ಅಭಿವೃದ್ಧಿಗೆ ಬೇಕಾದಷ್ಟು ಪ್ರೋತ್ಸಾಹವನ್ನು ಕೊಟ್ಟಿರುವರು. ಪ್ರತಿಯೊಂದರಲ್ಲಿಯೂ ಅತ್ಯಂತ ಸೂಕ್ಷ್ಮವಿಚಾರವನ್ನೂ ಅವರು ಮರೆತಿಲ್ಲ.

ವ್ಯವಸಾಯದ ಅಭಿವೃದ್ಧಿಗಾಗಿ ಸರಕಾರದವರು ಒಂದು ಇಲಾಖೆಯನ್ನೇ ಏರ್ಪಡಿಸಿದ್ದಾರೆ. ಈ ಇಲಾಖೆಯವರು ಅನೇಕ ಪರೀಕ್ಷಾಕ್ಷೇತ್ರಗಳನ್ನಿಟ್ಟು, ಇಲ್ಲಿ ತಮಗುಂಟಾದ ಅನುಭವವನ್ನು ದೇಶದಲ್ಲೆಲ್ಲಾ ಹರಡುತ್ತಿರುವರು. ರೈತರ ಮಕ್ಕಳಿಗಾಗಿ ಅಲ್ಲಲ್ಲಿ ವ್ಯವಸಾಯ ಸಂಬಂಧವಾದ ಪಾಠಶಾಲೆಗಳನ್ನು ಸ್ಥಾಪಿಸಿ, ತಿಳುವಳಿಕೆಯನ್ನು ಕೊಡುತ್ತಿರುವರು. ಬೆಂಗಳೂರಿಗೆ ಸಮೀಪದಲ್ಲಿ ಹೆಬ್ಬಾಳಿನಲ್ಲಿರುವ ಪಾಠಶಾಲೆಯೂ, ಪರೀಕ್ಷಾಕ್ಷೇತ್ರವೂ, ಸಂಸ್ಥಾನದಲ್ಲಿ ಮೊಟ್ಟಮೊದಲು ಸ್ಥಾಪಿಸಲ್ಪಟ್ಟು, ಮೈಸೂರು ಯುವಕರಲ್ಲಿ ಅನೇಕರಿಗೆ ಜೀವನೋಪಾಯವನ್ನು ಕಲ್ಪಿಸಿಕೊಡಲು ಸಾಧನವಾಗಿರುವುದಲ್ಲದೆ, ಸಂಸ್ಥಾನದ ವ್ಯವಸಾಯಾಭಿವೃದ್ಧಿಗೆ ಬಲುಮಟ್ಟಿಗೆ ಸಹಕಾರಿಯಾಗಿದೆ.

ವ್ಯವಸಾಯದ ಇಲಾಖೆಯವರೇ ತಾಲ್ಲೂಕು ಸ್ಥಳಗಳಲ್ಲಿ ಅಂಗಡಿಗಳನ್ನಿಟ್ಟು ರೈತರಿಗೆ ಬೇಕಾಗುವ ಹೊಸ ಗೊಬ್ಬರ, ಬೀಜಗಳು, ಮುಟ್ಟುಗಳು ಮತ್ತು ಯಂತ್ರೋಪಕರಣಗಳನ್ನು ಸುಲಭ ಕ್ರಯಕ್ಕೆ ಒದಗಿಸುತ್ತಿರುವರು. ಮಂಡ್ಯದಲ್ಲಿರುವ ಸಕ್ಕರೆಯ ಕಾರ್ಖಾನೆಯೂ ಈ ಇಲಾಖೆಯವರ ಮೆಹನತ್ತಿನಿಂದಲೆ ಸ್ಥಾಪಿತವಾಗಿ, ಮೈಸೂರು ದೇಶಕ್ಕೆ ಕೀರ್ತಿಯನ್ನು ತಂದಿದೆ.

ನಮ್ಮ ಮಹಾರಾಜರವರಿಗೆ ವಿದ್ಯಾಪ್ರಚಾರ ವಿಷಯದಲ್ಲಿ ಪ್ರೀತಿ ಹೆಚ್ಚು. ಪ್ರಜೆಗಳ ಸಮಸ್ತ ಅಭಿವೃದ್ಧಿಗೂ, ವಿದ್ಯೆಯೇ ಮೂಲಕಾರಣವೆಂದು ತಿಳಿದು ಎಲ್ಲೆಲ್ಲಿಯೂ ಪಾಠಶಾಲೆಗಳನ್ನು ಸ್ಥಾಪಿಸುತ್ತಿರುವರು. ಪ್ರಾಥಮಿಕ ಮತ್ತು ಮಾಧ್ಯಮಿಕ ಪಾಠಶಾಲೆಗಳಲ್ಲಿ ಓದತಕ್ಕ ಬಾಲಕರಿಗೆ ಉಚಿತವಾಗಿ ವಿದ್ಯೆಯನ್ನು ಕಲಿಸುತ್ತಿರುವುದಲ್ಲದೆ, ಹಿಂದುಳಿದ ಜನರಿಗೆ ವೇತನಗಳನ್ನೂ ಇತರ ಅನುಕೂಲತೆಗಳನ್ನೂ ಮಾಡಿಕೊಟ್ಟು ಪ್ರೋತ್ಸಾಹಿಸಿರುವರು.

೧೯೧೫ರಲ್ಲಿ ಸ್ಥಾಪಿತವಾದ ಕಾಶೀ ವಿಶ್ವವಿದ್ಯಾಪೀಠದ ಪ್ರಥಮ ಛಾನ್‌ಸೆಲರಾಗಿದ್ದುದಲ್ಲದೆ, ನಮ್ಮ ಮಹಾರಾಜರವರು ಇತರ ರಾಜರೆಲ್ಲರಿಗಿಂತ ಮೊದಲೇ

೧೯೧೬ರಲ್ಲಿ, ಮೈಸೂರಿನಲ್ಲಿ ವಿಶ್ವವಿದ್ಯಾಪೀಠವನ್ನು ಸ್ಥಾಪಿಸಿದರು. ಇದುವರೆಗೆ ಮದರಾಸು ವಿಶ್ವವಿದ್ಯಾಪೀಠದ ಮೇಲ್ವಿಚಾರಣೆಗೂ, ಪರೀಕ್ಷೆಗಳಿಗೂ ಒಳಪಟ್ಟಿದ್ದ ಮೈಸೂರು ಬೆಂಗಳೂರು ಕಾಲೇಜುಗಳನ್ನು ಮೈಸೂರು ವಿಶ್ವವಿದ್ಯಾಪೀಠಕ್ಕೆ ಸೇರಿಸಿ ಅವುಗಳ ಜೊತೆಗೆ ಹೊಸ ಕಾಲೇಜುಗಳನ್ನು ಏರ್ಪಡಿಸಿ, ಕಲಾ, ವಿಜ್ಞಾನ, ಶಿಲ್ಪ ಮತ್ತು ವೈದ್ಯಶಾಸ್ತ್ರಗಳನ್ನು ಕಲಿಯಲು ಸಮಸ್ತ ಸೌಕರ್ಯಗಳನ್ನೂ ಕಲ್ಪಿಸಿಕೊಟ್ಟಿದ್ದಾರೆ. ಸ್ತ್ರೀಯರ ವಿದ್ಯಾಭ್ಯಾಸಕ್ಕಾಗಿಯೆ ಪ್ರತ್ಯೇಕವಾಗಿ ಒಂದು ಕಾಲೇಜೂ, ಉಪಾಧ್ಯಾಯರು ಬೋಧನಕ್ರಮದಲ್ಲಿ ಶಿಕ್ಷಣಹೊಂದಲು ಒಂದು ಟ್ರೈನಿಂಗ್ ಕಾಲೇಜೂ ಮೈಸೂರಿನಲ್ಲಿವೆ. ನಮ್ಮ ದೇಶದವರಲ್ಲಿ ಶಿಲ್ಪಶಾಸ್ತ್ರ, ವಿಜ್ಞಾನಶಾಸ್ತ್ರ, ವೈದ್ಯಶಾಸ್ತ್ರಗಳಲ್ಲಿ ಸಮರ್ಥರೆನಿಸಿಕೊಂಡವರನ್ನು, ಪ್ರವೀಣತಾಪದವಿಯನ್ನು ಪಡೆಯುವುದಕ್ಕಾಗಿ ಇಂಗ್ಲೆಂಡ್, ಅಮೆರಿಕ, ಜರ್ಮನಿ, ಜಪಾನ್ ಮೊದಲಾದ ವಿದೇಶಗಳಿಗೆ ಶಿಕ್ಷಣ ಹೊಂದಲು, ವೇತನಗಳನ್ನು ಕೊಟ್ಟು ಕಳುಹಿಸುತ್ತಲಿದ್ದಾರೆ. ಇಷ್ಟೇ ಅಲ್ಲದೆ, ಸಂಸ್ಥಾನದ ದೊಡ್ಡ ಅಧಿಕಾರಗಳಿಗೆ ಮೇಧಾವಿಗಳನ್ನು ಆರಿಸಿಕೊಳ್ಳುವ ನಿಮಿತ್ತ ಅವಶ್ಯವಾದಾಗಲೆಲ್ಲ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ನಡೆಸುತ್ತಾರೆ.

ಆಳುವ ಮಹಾಸ್ವಾಮಿಯವರಿಗೆ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಹೆಚ್ಚು ಪ್ರೀತಿ. ಇವರಿಗೆ ಈ ಭಾಷೆಗಳು ಎಲ್ಲೆಲ್ಲಿಯೂ ಪ್ರಚಾರವಾಗಬೇಕೆಂಬ ಕೂತೂಹಲ. ಸಂಸ್ಕೃತ ವಿದ್ಯಾಭ್ಯಾಸಕ್ಕಾಗಿ ಇವರು ಮೈಸೂರು* ಬೆಂಗಳೂರುಗಳಲ್ಲಿ ಸಂಸ್ಕೃತ ಕಾಲೇಜುಗಳನ್ನು ಸ್ಥಾಪಿಸಿ, ವಿದ್ಯಾಪಾರಂಗತರಾದವರಿಗೆ ಬಹುಮಾನಗಳನ್ನು ಕೊಡುವುದಲ್ಲದೆ, ಸಂಸ್ಥಾನದ ಇತರ ಕಡೆಗಳಲ್ಲಿಯೂ ಸಾಮಾನ್ಯ ಸಂಸ್ಕೃತ ಪಾಠಶಾಲೆಗಳನ್ನು ಏರ್ಪಡಿಸಿ, ಜನರು ಸಂಸ್ಕೃತ ವಿದ್ಯಾಭ್ಯಾಸ ಮಾಡಲು ಬಲುಮಟ್ಟಿಗೆ ಅನುಕೂಲತೆಯನ್ನು ಮಾಡಿಕೊಟ್ಟಿದ್ದಾರೆ.

ಕನ್ನಡ ಭಾಷೆಯ ಏಳಿಗೆಗಾಗಿ ಶ್ರೀಮನ್ಮಹಾರಾಜರವರು ನಾನಾ ವಿಧಗಳಲ್ಲಿ ಸಹಾಯ ಮಾಡುತ್ತಲಿರುವರು. ಒಂದೊಂದು ಹಳ್ಳಿಯಲ್ಲಿಯೂ ಪ್ರಾಥಮಿಕ ಪಾಠಶಾಲೆಗಳನ್ನು ಸ್ಥಾಪಿಸಿದ್ದಾರೆ. ಮಾಧ್ಯಮಿಕ ಪಾಠಶಾಲೆಗಳಲ್ಲಿಯೂ, ಹೈಸ್ಕೂಲುಗಳಲ್ಲಿಯೂ ಕನ್ನಡ ಭಾಷೆಯ ಜೊತೆಗೆ ಗಣಿತ, ಚರಿತ್ರೆ, ಭೂಗೋಳ, ವಿಜ್ಞಾನ ಮೊದಲಾದ ವಿಷಯಗಳನ್ನೂ, ಕನ್ನಡದಲ್ಲಿಯೇ ಪಾಠ ಹೇಳುವಂತೆ ಏರ್ಪಡಿಸಿರುತ್ತಾರೆ. ವಿಶ್ವವಿದ್ಯಾಪೀಠದಲ್ಲೂ ಕನ್ನಡಕ್ಕೆ ವಿಶೇಷ ಪ್ರಾಶಸ್ತ್ಯ ದೊರೆಯುತ್ತಿದೆ. ಸುಮಾರು ಇಪ್ಪತ್ತೆರಡು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಸ್ಥಾಪಿತವಾದ ಕರ್ಣಾಟಕ ಸಾಹಿತ್ಯ ಪರಿಷತ್ತಿಗೂ ಇವರು ತಮ್ಮ ಅಭಯ ಹಸ್ತವನ್ನು ನೀಡಿ, ವಿಶೇಷವಾಗಿ ಪ್ರೋತ್ಸಾಹಿಸುತ್ತಿರುವರು. ಈ ಸಂಸ್ಥೆಯ ಕಾರ್ಯಸಮಿತಿಯ ಅಧ್ಯಕ್ಷಪದವಿಯನ್ನು ಆಳುವ ಮಹಾಸ್ವಾಮಿಯವರ ಸಹೋದರರಾದ ಶ್ರೀಕಂಠೀರವ ನರಸಿಂಹರಾಜ ಒಡೆಯರವರು ವಹಿಸಿಕೊಂಡಿದ್ದಾರೆ. ಈ ಪರಿಷತ್ತಿನ ಮೂಲಕ ಭಾರತವರ್ಷದಲ್ಲಿರುವ ಕನ್ನಡ ನಾಡಿನಲ್ಲೆಲ್ಲಾ ಒಂದು ಬಗೆಯ ಜಾಗೃತಿಯುಂಟಾಗಿದೆ.

---

*ಮೈಸೂರು ಸಂಸ್ಕೃತ ಕಾಲೇಜಿನ ವಿಶಿಷ್ಟ ವೆಚ್ಚವನ್ನೂ ಆಳುವ ಮಹಾಸ್ವಾಮಿಯವರು ತಮ್ಮ ಸ್ವಂತ ದ್ರವ್ಯದಿಂದಲೇ ನಿರ್ವಹಿಸುತ್ತಲಿರುವರು.

ನಮ್ಮ ಮಹಾರಾಜರವರು ವರ್ಷ ಒಂದಕ್ಕೆ ಅರುವತ್ತು ಲಕ್ಷ ರೂಪಾಯಿಗಳನ್ನು ವಿದ್ಯಾಭ್ಯಾಸ ಒಂದಕ್ಕಾಗಿಯೇ ವೆಚ್ಚಮಾಡುತ್ತಿರುವರು. ಇವರ ಕಾಲದಲ್ಲಿ ಸ್ತ್ರೀವಿದ್ಯಾಭ್ಯಾಸವೂ ಬಹುದೂರ ಮುಂದುವರಿದಿರುವುದಲ್ಲದೆ ಕುರುಡ, ಕಿವುಡ ಮತ್ತು ಮೂಗರಿಗೂ ಉಚಿತ ರೀತಿಯಲ್ಲಿ ವಿದ್ಯಾಭ್ಯಾಸವು ನಡೆಯುತ್ತಿದೆ.

ಒಟ್ಟಿನಲ್ಲಿ ಮೈಸೂರು ಪ್ರಜೆಗಳ ಏಳಿಗೆಗಾಗಿ ಪ್ರೌಢವಿದ್ಯಾಭ್ಯಾಸವನ್ನು ಸ್ತ್ರೀಪುರುಷರಲ್ಲಿ ಒಂದೇ ಸಮವಾಗಿ ಹರಡುವ ವಿಚಾರದಲ್ಲಿಯೂ ದೇಶಭಾಷೆಗಳ ಏಳಿಗೆಯ ವಿಚಾರದಲ್ಲಿಯೂ ಆಳುವ ಮಹಾಸ್ವಾಮಿಯವರಿಗೆ ಎಷ್ಟರ ಮಟ್ಟಿನ ಅಭಿಲಾಷೆ ಇದೆ ಎಂಬುದು ಅವರು ಮೈಸೂರು ವಿಶ್ವವಿದ್ಯಾಪೀಠದ ಮೊದಲನೆಯ ಪದವೀದಾನ ಮಹೋತ್ಸವ ಕಾಲದಲ್ಲಿ ಮಾಡಿದ ಭಾಷಣದಿಂದ ವ್ಯಕ್ತವಾಗುವುದು.

ಮೈಸೂರು ವಿಶ್ವವಿದ್ಯಾಪೀಠದ ಮೊದಲನೆಯ ಪದವೀದಾನ ಮಹೋತ್ಸವವು ೧೯೧೮ನೆಯ ಅಕ್ಟೋಬರ್ ೧೯ನೆಯ ತಾರೀಖಿನಲ್ಲಿ, ಛಾನ್‌ಸೆಲರಾದ ಶ್ರೀಮನ್ಮಹಾರಾಜರವರ ಅಧ್ಯಕ್ಷತೆಯಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಈ ವಿಶ್ವವಿದ್ಯಾಪೀಠದ ವೈಸ್ ಛಾನ್‌ಸೆಲರಾಗಿದ್ದ ಶ್ರೀ ಎಚ್. ವಿ. ನಂಜುಂಡಯ್ಯನವರ ಭಾಷಣವಾದ ಬಳಿಕ ಶ್ರೀಮನ್ಮಹಾರಾಜರವರು ಅಪ್ಪಣೆಕೊಡಿಸಿದ ಹೃದಯಂಗಮವಾದ ಭಾಷಣದ ಕೆಲವು ಭಾಗಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ. "ಈ ಎರಡು ವರ್ಷಗಳಕಾಲದಲ್ಲಿ ನಮ್ಮ ವಿಶ್ವವಿದ್ಯಾಪೀಠದಲ್ಲಿ ವಾಣಿಜ್ಯದ ಮತ್ತು ಶಿಲ್ಪದ ಡಿಗ್ರಿಗಳನ್ನು ಹೊಸದಾಗಿ ಸೇರಿಸಿರುತ್ತೇವೆ. ಇನ್ನೂ ಇತರ ವಿದ್ಯಾಭಾಗಗಳನ್ನು ಸೇರಿಸುವ ಆಲೋಚನೆಯಿದೆ," ಎಂಬ ವಾಕ್ಯಗಳನ್ನು ನೋಡಿದರೆ ನಮ್ಮ ವಿಶ್ವವಿದ್ಯಾಪೀಠ ದಿಂದ ಕಲೆಗಳನ್ನು ಸರ್ವತೋಮುಖವಾಗಿ ಹರಡಿಸುವುದರಲ್ಲಿ ಶ್ರೀಮನ್ಮಹಾರಾಜರವರಿಗೆ ಎಷ್ಟರಮಟ್ಟಿನ ಆಸಕ್ತಿಯಿರುವುದೆಂಬುದು ವ್ಯಕ್ತವಾಗುವುದು.

ಸ್ತ್ರೀವಿದ್ಯಾಭ್ಯಾಸದ ವಿಚಾರದಲ್ಲಿ ನಮ್ಮ ಮಹಾರಾಜರವರು ಇನ್ನೂ ಎಷ್ಟುಮಟ್ಟಿಗೆ ಪ್ರೋತ್ಸಾಹವನ್ನು ಕೊಡಲುಳ್ಳವರೆಂಬುದು ಈ ಕೆಳಗಣ ವಾಕ್ಯಗಳಿಂದ ಗೊತ್ತಾಗುವುದು. "ಈ ದಿನ ನಮ್ಮೆದಿರಿಗೆ ಒಬ್ಬ ಸ್ತ್ರೀ ಗ್ರಾಜುಯೇಟಲ್ಲ; ಹತ್ತು ಜನ ಸ್ತ್ರೀ ಗ್ರಾಜುಯೇಟುಗಳು ಬಂದಿದ್ದರೆ ಚೆನ್ನಾಗಿತ್ತೆಂದು ನಮ್ಮ ಅಪೇಕ್ಷೆ. ಉಪಾಧ್ಯಾಯ ವೃತ್ತಿಯಲ್ಲಿ ತರಬೇಕಾದ ಸ್ತ್ರೀ ಗ್ರಾಜುಯೇಟುಗಳಾದ ಉಪಾಧ್ಯಾಯಿನಿಯರನ್ನು ಮೈಸೂರು ರಾಜ್ಯದ ಪ್ರತಿಯೊಂದು ಡಿಸ್ಟ್ರಿಕ್ಟಿನಲ್ಲಿಯೂ ಎಂದಿಗೆ ಕಾಣುವೆವೋ ಎಂದು ನಿರೀಕ್ಷಿಸುತ್ತಲೇ ಇದ್ದೇವೆ."

ದೇಶಭಾಷಾಭಿವೃದ್ಧಿಯ ವಿಚಾರದಲ್ಲಿ ಶ್ರೀಮನ್ಮಹಾರಾಜರವರಿಗೆ ಎಷ್ಟು ದೂರ ಆಸಕ್ತಿಯಿರುವುದೆಂಬುದನ್ನು ಈ ಕೆಳಗಣ ವಾಕ್ಯಗಳಿಂದ ಊಹಿಸಬಹುದು. "ನಮ್ಮ ವಿಶ್ವವಿದ್ಯಾಪೀಠದಲ್ಲಿ ದೇಶಭಾಷೆಗಳಿಗೆ ಬಹಳ ಪ್ರಾಮುಖ್ಯವನ್ನು ಕೊಟ್ಟು ಅವುಗಳನ್ನು ವಿಶ್ವವಿದ್ಯಾಪೀಠದ ವ್ಯಾಸಂಗವು ಮುಗಿಯುವವರೆಗೂ ಅವಶ್ಯವಾಗಿ ಓದಿಯೇತೀರಬೇಕೆಂದು ಏರ್ಪಾಡು ಮಾಡಿದೆ. ವಿದ್ಯಾಪೀಠದ ಪುಸ್ತಕ ಪ್ರಕಟನಶಾಲೆಯಲ್ಲಿ ತಿಳಿಗನ್ನಡದೊಳಗೆ ಬರೆದ ಉತ್ಕೃಷ್ಟವಾದ ಪುಸ್ತಕಗಳನ್ನು ಪ್ರಕಟಿಸಲು ಏರ್ಪಾಡುಮಾಡಿದೆ. ಇಷ್ಟೇ ಅಲ್ಲ,

ಸಂಸ್ಕೃತ ವ್ಯಾಸಂಗಕ್ಕೂ ತಕ್ಕ ಪ್ರೋತ್ಸಾಹವನ್ನು ಕೊಟ್ಟಿದೆ. ವಿದ್ಯಾವಂತರಾದ ಮೈಸೂರು ನಿವಾಸಿಗಳ ಅಭಿಮಾನಕ್ಕೂ ಆದರಕ್ಕೂ ಅನವರತವೂ ಪಾತ್ರವಾದ ನಮ್ಮ ಮಾತೃಭಾಷೆಯ (ಕನ್ನಡದ) ಮತ್ತು ಸಂಸ್ಕೃತದ ವ್ಯಾಸಂಗವನ್ನು ಪರಿಪುಷ್ಟಿಗೊಳಿಸಲು ನಮ್ಮ ವಿದ್ಯಾಪೀಠದವರು ಸರ್ವಸಾಹಸವನ್ನೂ ಮಾಡುವರೆಂದು ನಂಬಿರುತ್ತೇವೆ.''

ವಿಶ್ವವಿದ್ಯಾಪೀಠದ ವಿದ್ಯಾರ್ಥಿಗಳಿಗೆ ವಾಸಕ್ಕೆ ತಕ್ಕ ಸೌಕರ್ಯಗಳನ್ನು ಏರ್ಪಡಿಸಬೇಕೆಂದೂ, ಅನೇಕ ವಿದ್ಯಾರ್ಥಿಗಳಿಗೆ ಹಾಸ್ಟೆಲುಗಳಲ್ಲಿರುವುದಕ್ಕೆ ದ್ರವ್ಯಾನುಕೂಲತೆ ಸಾಲದೆಂದೂ, ಅದಕ್ಕಾಗಿ ವಿದ್ಯಾರ್ಥಿಗಳಿಗೆ ಸುಲಭವಾದ ವೆಚ್ಚದಲ್ಲಿ ಭೋಜನ ಸೌಕರ್ಯವನ್ನು ಸರಿಯಾದ ಸ್ಥಳಗಳಲ್ಲಿ ಕಲ್ಪಿಸುವುದಕ್ಕೆ ಮಹಾಜನರು ಪ್ರಯತ್ನ ಪಡಬೇಕೆಂದೂ ತಮಗಿರುವ ಅಪೇಕ್ಷೆಯನ್ನು ಮಹಾರಾಜರವರು ತಿಳಿಸಿರುವುದಲ್ಲದೆ, ವಿದ್ಯಾರ್ಥಿಗಳ ಕಾಯಪುಷ್ಟಿಗೂ ಆರೋಗ್ಯ ಪರೀಕ್ಷೆಗೂ ತಕ್ಕ ಏರ್ಪಾಡುಗಳು ನಡೆಯಬೇಕೆಂದೂ ಕೋರಿರುತ್ತಾರೆ.

ಮೈಸೂರು ವಿಶ್ವವಿದ್ಯಾಪೀಠದ ಸ್ಥಾಪನೆಗೆ ದಿವಾನ್ ಸರ್. ಎಂ. ವಿಶ್ವೇಶ್ವರಯ್ಯನವರೇ ಮುಖ್ಯಕಾರಣರೆಂಬುದು ಜಗದ್ವಿದಿತವಾಗಿದೆ. ಈ ವಿದ್ಯಾಪೀಠ ಸ್ಥಾಪನೆಯಲ್ಲಿ ಅವರು ಎಷ್ಟು ಅಭಿಮಾನಶಾಲಿಗಳಾಗಿ ಸಾಹಸಪಟ್ಟರೆಂಬುದನ್ನೂ, ಅದಕ್ಕಾಗಿ ಅವರು ಎಷ್ಟರಮಟ್ಟಿನ ಶ್ಲಾಘನೆಗೆ ಪಾತ್ರರಾಗಿರುವರೆಂಬುದನ್ನೂ ಶ್ರೀಮನ್ಮಹಾರಾಜರವರ ಅಮೋಘವಾದ ಭಾಷಣದಿಂದ ಸ್ಪಷ್ಟವಾಗಿ ತಿಳಿಯಬಹುದು. ಮಹಾರಾಜರವರು ಅಪ್ಪಣೆಕೊಡಿಸಿದುದೇನೆಂದರೆ, “ನಮ್ಮರಾಜ್ಯದ ಮಂತ್ರಿವರ್ಯರಾದ ಶ್ರೀಯುತ ಸರ್. ಎಂ. ವಿಶ್ವೇಶ್ವರಯ್ಯನವರಿಗೆ ನಾವೂ ನಮ್ಮ ಪ್ರಜೆಗಳೂ ಎಷ್ಟರಮಟ್ಟಿಗೆ ಕೃತಜ್ಞರಾಗಿರುವೆ ಎಂಬುದನ್ನು ಈ ಮಹಾಸಭೆಯಲ್ಲಿ ಪ್ರಕಟಪಡಿಸಬೇಕೆಂದು ನಮ್ಮ ಮನಸ್ಸು ಓಡುತ್ತಿದೆ. ಹಿಂದೆ ನಮ್ಮೆಲ್ಲರಿಗೂ ಸ್ವಪ್ನ ಪ್ರಾಯವಾಗಿದ್ದ ಮೈಸೂರು ವಿಶ್ವವಿದ್ಯಾಪೀಠವು ಈದಿನ ನಮ್ಮಿದಿರಿಗೆ ಸಾಕ್ಷಾತ್ತಾಗಿ ನಿಂತಿರುವುದಕ್ಕೆ, ಇವರ ದೇಶಾಭಿಮಾನವೇ ಇವರ ಉತ್ಸಾಹವೇ, ಇವರು ಪಟ್ಟುಹಿಡಿದು ಮಾಡಿದ ಸಾಧನಗಳೇ ಮುಖ್ಯ ಕಾರಣ. ಈ ವಿದ್ಯಾಪೀಠವು ಮೂರ್ತೀಭವಿಸಿದ ಸಂಬಂಧಲ್ಲಿ ಎಲ್ಲರಿಗಿಂತಲೂ ಮೇಲಾಗಿ ಇವರ ಹೆಸರೇ ಆಚಂದ್ರಾರ್ಕ ಸ್ಥಾಯಿಯಾಗಿ ಬೆಳಗುವುದು.'' ಈ ವಾಕ್ಯಗಳಲ್ಲಿ ಶ್ರೀಯುತ ವಿಶ್ವೇಶ್ವರಯ್ಯನವರ ಗುಣವರ್ಣನೆಯನ್ನೆಲ್ಲಾ ಆಳುವ ಮಹಾಸ್ವಾಮಿಯವರು ಸಂಕ್ಷೇಪವಾಗಿ ಅಡಗಿಸಿರುತ್ತಾರೆ.

ಶ್ರೀಮನ್ಮಹಾರಾಜರವರು, ತಮ್ಮ ಭಾಷಣವು ಮುಗಿದ ಬಳಿಕ, ಇದೇ ಕೆಲಸಕ್ಕಾಗಿ ಕಲ್ಕತ್ತಾ ಪಟ್ಟಣದಿಂದ ಕರೆಸಿದ್ದ ಸರ್ ಅಸುತೋಷ ಮುಖರ್ಜಿಯವರನ್ನು ಕುರಿತು ಈ ವರ್ಷದ ಪದವೀಧರರಿಗೆ (ಡಿಗ್ರಿ ಪಡೆದ ಗ್ರಾಜುಯೇಟುಗಳಿಗೆ) ಹಿತೋಪದೇಶಮಾಡುವಂತೆ ಕೋರಿದರು. ಈ ಮಹನೀಯರು ಮಹಾರಾಜರವರ ಆಣತಿಗೆ ತಲೆಬಾಗಿ, ಬಹು ವಿಷಯಗರ್ಭಿತವಾದ ಒಂದು ಪ್ರೌಢಭಾಷಣವನ್ನು ಮಾಡಿದರು. ಅದರಲ್ಲಿ ವಿಶ್ವವಿದ್ಯಾಪೀಠವೆಂದರೇನು, ಅದರ ಕೆಲಸಗಳು ಹೇಗೆ ನಡೆಸಬೇಕು, ಅಲ್ಲಿ ಯಾವ ಯಾವ ವಿದ್ಯೆಗಳನ್ನು ಕಲಿಸಬೇಕು, ವಿದ್ಯಾಪೀಠದ ಮುಖ್ಯೋದ್ದೇಶವೇನು, ವಿಶ್ವವಿದ್ಯಾಪೀಠದಿಂದ ದೇಶಾಭ್ಯುದಯವಾಗುವುದು ಹೇಗೆ ಇವೇ ಮೊದಲಾದ ವಿಷಯಗಳನ್ನು ಯುಕ್ತವಾದ ಉಪಮಾನಗಳಿಂದ ಮನಸ್ಸಿಗೆ ನಾಟುವಂತೆ ವಿಸ್ತರಿಸಿದರು.

ಕಡೆಯದಾಗಿ ಮೈಸೂರು ವಿಶ್ವವಿದ್ಯಾಪೀಠದ ಪ್ರಥಮ ಪದವೀಧರರನ್ನು ಕುರಿತು ಉಪದೇಶಮಾಡುವಾಗ್ಗೆ, "ಮೈಸೂರು ದೇಶದ ಹೊಸ ಗ್ರಾಜುಯೇಟುಗಳೇ, ನಿಮ್ಮ ರಾಜ್ಯದ ಭವಿಷ್ಯದಭಿವೃದ್ಧಿಗೆ ನೀವೇ ಹೊಣೆಗಾರರು ; ಚೆನ್ನಾಗಿ ನೆನಪಿಡಿ. ನೀವು ಒಳ್ಳೆಯವರಾಗಿ, ಉತ್ತಮ ಪದವಿಯಲ್ಲಿದ್ದು, ಚೆನ್ನಾಗಿ ಹಣಸಂಪಾದಿಸುವುದು ಮಾತ್ರವೇ ಸಾಲದು. ಅದಕ್ಕಿಂತ ಹೆಚ್ಚಿನ ಯಶಸ್ಸನ್ನು ನಿಮಗೆ ಸಂಪಾದಿಸಿಕೊಡುವ ಮತ್ತೊಂದು ಕೆಲಸವಿದೆ. ಏನೆಂದರೆ, ನೀವು ನಿಮ್ಮ ಉನ್ನತಪದವಿಯಿಂದ ಬಾಗಿ ನಿಮಗಿಂತಲೂ ಕೆಳಗಿರುವ ಮನುಷ್ಯವರ್ಗವನ್ನು ಮೇಲಕ್ಕೆತ್ತಬೇಕು. ಒಳ್ಳೆಯವರು, ನಡುಗಾಡಿನಲ್ಲಿ ಉನ್ನತವಾಗಿ ಬೆಳೆದ ವೃಕ್ಷದಂತೆ ಅಟ್ಟಹಾಸದಿಂದ ತಮ್ಮ ಕೆಲಸವನ್ನು ಮಾತ್ರ ನೋಡಿಕೊಂಡು ಹೋಗುವವರಲ್ಲ ; ಹಾಳು ಗಿಡಗಳ ನಡುವೆ ಬೆಳೆದ ಕರ್ಪೂರವೃಕ್ಷದಂತೆ ಸುತ್ತಲೂ ಸುವಾಸನೆಯನ್ನು ಬೀರಿ ಅನಾರೋಗ್ಯಕರವಾದ ಗಾಳಿಯನ್ನು ಹೋಗಲಾಡಿಸಿ ಆರೋಗ್ಯವನ್ನೂ ಬಲವನ್ನೂ ಉಂಟುಮಾಡುವರು. ತುಳಸಿಯಂತೆಯೂ, ಕಲ್ಪವೃಕ್ಷದಂತೆಯೂ, ಅಮೃತಸಂಜೀವಿನಿಯಂತೆಯೂ, ಲೋಕಕ್ಕೆಲ್ಲ ಕ್ಷೇಮವನ್ನುಂಟುಮಾಡುವರು. ಆದ ಕಾರಣ ಕೇಡನ್ನು ಪರಿಹರಿಸುವುದರಲ್ಲಿಯೇ, ಕೆಟ್ಟಕೆಲಸವನ್ನು ತಡೆಯುವುದರಲ್ಲಿಯೇ, ನೀವು ತೃಪ್ತರಾಗದೆ ಮನುಷ್ಯವರ್ಗಕ್ಕೆ ನಿಮ್ಮಿಂದಾಗುವ ಸಹಾಯವನ್ನೆಲ್ಲಾ ಮಾಡಿ ವಿದ್ಯೆಯ ಸತ್ಫಲವು ಎಷ್ಟರಮಟ್ಟಿಗೆ ವ್ಯಾಪಿಸುವ ಚೈತನ್ಯವುಳ್ಳದೆಂದು ಲೋಕಕ್ಕೆಲ್ಲಾ ಪ್ರಕಾಶಪಡಿಸಿರಿ." ಎಂದು ಶ್ಲಾಘ್ಯವೂ ಅನುಸರಣೀಯವೂ ಆದ ಕೆಲವು ಹಿತೋಕ್ತಿಗಳನ್ನು ಹೇಳಿದರು.

ಕಾಶೀಕ್ಷೇತ್ರದ ಹಿಂದು ವಿಶ್ವವಿದ್ಯಾಪೀಠದ ಮೊದಲನೆಯ ಪದವೀದಾನ ಮಹೋತ್ಸವವು ೧೯೧೯ನೆಯ ಜನವರಿ ೧೭ನೆಯ ತಾರೀಖಿನ ದಿನ ನಡೆಯಿತು. ಆ ಸಂದರ್ಭದಲ್ಲಿ ಅಗ್ರಾಸನವನ್ನು ವಹಿಸಿದ್ದ ಈ ವಿದ್ಯಾಪೀಠದ ಛಾನ್ಸೆಲರಾದ ನಮ್ಮ ಶ್ರೀಮನ್ಮಹಾರಾಜರವರು ಆ ಸಲದ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರಿಕೆಗಳನ್ನು ದಯೆಪಾಲಿಸಿದರು. ತರುವಾಯ ಹೃದಯಂಗಮವಾಗಿಯೂ ಅನೇಕ ವಿಷಯಗರ್ಭಿತವಾಗಿಯೂ ಇದ್ದ ಒಂದು ಭಾಷಣವನ್ನು ಮಾಡಿದರು. ಅದರಲ್ಲಿ ಹಿಂದು ವಿಶ್ವವಿದ್ಯಾಪೀಠದ ಏಳಿಗೆಗೆ ಅನೇಕ ವಿಧಗಳಲ್ಲಿ ಸಹಾಯಮಾಡಿ ಪೋಷಿಸಿದ ಕಾಶಿ, ದರ್ಭಾಂಗ, ಗ್ವಾಲಿಯರ್, ಕಾಶ್ಮೀರ ಮತ್ತು ಬಿಕನೀರ್ ಮಹಾರಾಜರುಗಳನ್ನೂ, ಶ್ರೀ ಪಂಡಿತ ಮದನಮೋಹನ ಮಾಳವಿಯರನ್ನೂ, ಮಿಸೆಸ್ ಬೆಸೆಂಟರನ್ನೂ ಕೊಂಡಾಡಿದ ಬಳಿಕ ನಮ್ಮ ಶ್ರೀಮನ್ಮಹಾರಾಜರವರು ಅಪ್ಪಣೆಕೊಡಿಸಿದ ಮುಖ್ಯವಿಷಯಗಳೇನೆಂದರೆ, "ಜ್ಞಾನವೇ ಭೂಷಣವೆಂದು ನಮ್ಮ ವೇದಾಂತವು ಸಾರುತ್ತಿದೆ. ಅವಿದ್ಯೆಯಿಂದ ಪಾಪವೂ, ವಿದ್ಯೆಯಿಂದ ಆತ್ಮಕ್ಕೆ ಪವಿತ್ರತೆಯೂ, ವಿಮೋಚನೆಯೂ ಉಂಟಾಗುವುವು. ನಮ್ಮಲ್ಲಿ ಸ್ವಸಂಕಲ್ಪ ಶಕ್ತಿಯೂ, ಕಾರ್ಯಸಾಧನ ಸಾಮರ್ಥ್ಯವೂ ಹೇರಳವಾಗಿದೆಯೆಂದು ನಿರೂಪಿಸುವುದಕ್ಕೆ ಈ ವಿಶ್ವವಿದ್ಯಾಪೀಠಸ್ಥಾಪನೆಯೇ ದೊಡ್ಡ ನಿದರ್ಶನ. ಸರಕಾರದ ವಿಶ್ವವಿದ್ಯಾಪೀಠಗಳನ್ನು ಬಿಟ್ಟರೆ, ಮಹಾಜನರಿಂದ ಸ್ಥಾಪಿತವಾದ ವಿಶ್ವವಿದ್ಯಾಪೀಠಗಳಲ್ಲಿ ಇದೇ ಮೊದಲನೆಯದು. ಇದೇ ರೀತಿಯಾಗಿ ಆಲಿಘಡದ ವಿಶ್ವವಿದ್ಯಾಪೀಠವೂ ಶೀಘ್ರದಲ್ಲಿಯೇ ಸ್ಥಾಪನೆಯಾಗಲೆಂದು ಕೋರುತ್ತೇವೆ. ಈ ಕಾಶೀವಿಶ್ವವಿದ್ಯಾಪೀಠವು ಭಾರತೀಯರ

ಸ್ವಸಾಮರ್ಥ್ಯದಿಂದಲೇ ಸ್ಥಾಪಿತವಾಗಿ ಅವರ ಸ್ವಶಕ್ತಿಯಿಂದಲೇ ನಡೆಯುತ್ತಿದೆ. ಇದರಿಂದ ಇನ್ನು ಮುಂದೆ ಭರತಖಂಡದ ವಿದ್ಯಾಧಿಕಾರವನ್ನೆಲ್ಲಾ ಇವರೇ ಸುಸೂತ್ರವಾಗಿ ನಡೆಯಿಸಬಲ್ಲರೆಂಬುದಕ್ಕೆ ಇದು ತಕ್ಕ ದೃಷ್ಟಾಂತ. ಈ ವಿದ್ಯಾಪೀಠದಲ್ಲಿ, ನಮ್ಮ ಪೂರ್ವಪದ್ಧತಿಗಳಿಗೆ ತಕ್ಕಂತೆ, ವಿದ್ಯಾರ್ಥಿಗಳು ಗುರುಕುಲವಾಸಮಾಡಿ ವಿದ್ಯಾರ್ಜನೆ ಮಾಡುವುದಕ್ಕೆ ಅನುಕೂಲತೆಗಳನ್ನು ಮಾಡಿದೆ.

ಮುಂದೆ ಈ ವಿಶ್ವವಿದ್ಯಾಪೀಠದಲ್ಲಿ ನಮ್ಮ ಭಾರತ ಭೂಮಿಯ ನಾಗರಿಕತೆಯನ್ನೂ, ಮನಃಪರಿಪಾಕವನ್ನೂ ಪೋಷಿಸಿ ಅಭಿವೃದ್ಧಿಪಡಿಸಿಕೊಳ್ಳುವುದಕ್ಕೆ ಬೇಕಾದ ಸರ್ವಸಾಹಸಗಳನ್ನೂ ಮಾಡಬೇಕು. ಈ ಕಾಲದ ವಿದ್ಯೆಯ ಜೊತೆಗೆ ನಮ್ಮ ಪೂರ್ವಕಾಲದ ಪಾರಮಾರ್ಥಿಕ ವಿದ್ಯೆಯನ್ನೂ ಸೇರಿಸಿ ನಮ್ಮ ಜನರನ್ನು ಸರ್ವ ವಿಷಯಗಳಲ್ಲಿಯೂ ಶಕ್ತರನ್ನಾಗಿಮಾಡಬೇಕು. ಭಾರತೀಯರಾದ ನಾವು ಮುಖ್ಯವಾಗಿ ನೆನಪಿಡತಕ್ಕ ಒಂದು ವಿಷಯವಿದೆ. ಏನೆಂದರೆ, ನಮ್ಮ ಪೂರ್ವಸ್ಥಿತಿಯ ಮಹಿಮೆಯನ್ನು ಕೊಂಡಾಡುವುದರಲ್ಲಿಯೇ ನಮ್ಮ ದೇಶಾಭಿಮಾನವೆಲ್ಲ ಕೊನೆಗಾಣುವಂತಿರಕೂಡದು; ನವೀನ ವಿಷಯಗಳು ಏನುಬಂದರೂ ಅವುಗಳನ್ನೆಲ್ಲ ನಿರಾಕರಿಸದೆ ಅವುಗಳಲ್ಲಿ ಉತ್ತಮವಾದುವುಗಳನ್ನು ಸಂಗ್ರಹಿಸಬೇಕು. ಇತರ ದೇಶದವರೊಡನೆ ವ್ಯವಹಾರವನ್ನು ಇಟ್ಟುಕೊಂಡಮಾತ್ರದಿಂದಲೇ ಯಾರಿಗೂ ಏನೂ ಕೆಡುಕುಂಟಾಗುವುದಿಲ್ಲ. ಆದಕಾರಣ ಈ ವಿಶ್ವವಿದ್ಯಾಪೀಠವು ಸರ್ವದೇಶ ಸರ್ವಕಾಲಗಳ ಸತ್ಫಲಗಳನ್ನೆಲ್ಲ ಸಂಗ್ರಹಿಸಿ ಈ ಕಾಲಕ್ಕೆ ತಕ್ಕ ಅಭ್ಯುದಯವನ್ನು ತನ್ನ ವಿದ್ಯಾರ್ಥಿಗಳಲ್ಲಿ ಉಂಟುಮಾಡುವುದರಲ್ಲಿಯೇ ನಿರತವಾಗಿರಬೇಕೆಂದು ನಮ್ಮ ಅಪೇಕ್ಷೆ.

ಮಹಿಮಾಸ್ಪದವಾದ ಕಾಶೀಕ್ಷೇತ್ರದ ಹೆಸರೇ ಈ ನಮ್ಮ ವಿಶ್ವವಿದ್ಯಾಪೀಠಕ್ಕೆ ಬೇಕಾದಷ್ಟು ಪವಿತ್ರತೆಯನ್ನುಂಟುಮಾಡಿದೆ. ಅನಾದಿಯಿಂದ ಪುಣ್ಯಕ್ಷೇತ್ರವೆನಿಸಿಕೊಂಡ ಕಾಶೀ ಮಹಾನಗರದಲ್ಲಿ ಈ ವಿಶ್ವವಿದ್ಯಾಪೀಠವು ಸ್ಥಾಪನೆಯಾಗಿರುವುದನ್ನು ಸಾರ್ಥಕಪಡಿಸಬೇಕು. ಈ ಹೆಸರನ್ನು ಕೇಳಿದ ಮಾತ್ರದಿಂದಲೇ ನಮ್ಮ ಹೃದಯವೆಲ್ಲವೂ ದೇಶಾಭಿಮಾನದಿಂದಲೂ ಪಾರಮಾರ್ಥಿಕ ಬುದ್ಧಿಯಿಂದಲೂ, ಘನವಿಷಯಗಳಿಂದಲೂ ತುಂಬಿ ನಮ್ಮ ಪೂರ್ವವೈಭವವನ್ನು ಸ್ಮರಣೆಗೆ ತರುತ್ತಿರುವುದು. ಆದರೆ ಇಷ್ಟು ಮಾತ್ರದಿಂದಲೇ ನಾವು ಜಾತಿಪಂಗಡಗಳ ಅಭಿಮಾನವನ್ನು ಹೆಚ್ಚಿಸುತ್ತ ಸರ್ವತೋಮುಖವಾದ ಅಭಿವೃದ್ಧಿಗೆ ಉದಾರವಾಗಿ ಆಸ್ಪದಕೊಡದೆ ಇರಕೂಡದು. ಈ ಹೊಸ ವಿಶ್ವವಿದ್ಯಾಪೀಠದಿಂದ ನಮ್ಮ ದೇಶವು ಹೊಸ ಭರತಖಂಡವಾಗಿ ಐಕಮತ್ಯದಿಂದ ಕಟ್ಟಲ್ಪಡಬೇಕು. ಇದಕ್ಕಾಗಿ ನಾವು ವಿದ್ಯಾರ್ಥಿಗಳಿಗೆ ಸದ್ಗುಣಗಳನ್ನೂ ಒಳ್ಳೆಯ ಶೀಲಗಳನ್ನು ಹೆಚ್ಚು ಹೆಚ್ಚಾಗಿ ಕಲಿಸುತ್ತ ಬರಬೇಕು. ಅಮೆರಿಕ ದೇಶದಲ್ಲಿ ಜನರೆಲ್ಲರನ್ನೂ ಒಂದುಗೂಡಿಸಿ ಒಂದೇ ಜನಾಂಗವಾಗಿ ಮಾಡಬೇಕೆಂಬ ಉದ್ದೇಶದಿಂದ ಅಲ್ಲಿಯವರಿಗೆ ಪ್ರಜಾಧರ್ಮವನ್ನೂ ದೇಶಾಭಿಮಾನವನ್ನೂ ರಾಜಭಕ್ತಿಯನ್ನೂ ಪಾಠಶಾಲೆಗಳಲ್ಲಿ ಕಲಿಸುವುದಕ್ಕೆ ಏರ್ಪಾಡು ಮಾಡಿರುವರೆಂದು ಕೇಳುತ್ತೇವೆ. ಇದೇ ವಿಧವಾದ ಏರ್ಪಾಡೇ ಈ ದೇಶದಲ್ಲಿಯೂ ನಡೆಯಬೇಕು; ಅದರಲ್ಲಿಯೂ ಇಲ್ಲಿ ಜಾತಿ ಕುಲ ಗೋತ್ರಗಳ ಗೊಂದಲದಿಂದ ಹುಟ್ಟಿರುವ ಅನರ್ಥವನ್ನು ಹೋಗಲಾಡಿಸುವುದಕ್ಕೆ ಈ ಏರ್ಪಾಡು ಅತ್ಯಾವಶ್ಯಕವಾಗಿರಬೇಕು. ಈ ವಿಶ್ವವಿದ್ಯಾಪೀಠದಲ್ಲಿ ಆರ್ಯಮತ

ಧರ್ಮವನ್ನೂ ಆರ್ಯರ ಸದ್ಗುಣವನ್ನೂ ಕಡ್ಡಾಯವಾಗಿ ಕಲಿಸುವುದಕ್ಕೆ ಏರ್ಪಾಡುಮಾಡಿದೆ. ಇದರಿಂದ, ಮೇಲೆ ಹೇಳಿದ ಉದ್ದೇಶಗಳು ಸಾರ್ಥಕವಾಗಿ ಜನರ ಮನಸ್ಸು ಉದಾರವಾದ ಮಾರ್ಗದಲ್ಲಿ ಪರಿಪಕ್ವ ಹೊಂದುವುದೆಂದು ನಂಬುತ್ತೇವೆ.

ಇದಲ್ಲದೆ ಮತ್ತೊಂದು ವಿಷಯವುಂಟು. ಈ ಕಾಲದಲ್ಲಿ ಆಧುನಿಕ ಶಾಸ್ತ್ರಗಳು ಎಲ್ಲೆಲ್ಲಿಯೂ ಹಬ್ಬುತ್ತಿವೆ. ಅರ್ಥಸಾಧನೆಗೆ ಶಾಸ್ತ್ರ ಸಹಾಯವು ಅತ್ಯಾವಶ್ಯಕವಾಗಿ ಬೇಕಾಗಿರುತ್ತದೆ. ಎಲ್ಲಿ ಅರ್ಥಸಾಧನೆಯೂ ಆಧುನಿಕ ಶಾಸ್ತ್ರಗಳ ಅಭಿವೃದ್ಧಿಯೂ ಕಡಿಮೆಯಾಗಿರುವುದೋ ಅಲ್ಲಿ ಜನರು ಬಹಳ ಹಿಂದೆ ಬಿದ್ದಿರಬೇಕಾಗುತ್ತದೆ. ಆದಕಾರಣ ಈ ವಿಶ್ವವಿದ್ಯಾಪೀಠದಲ್ಲಿ ಶಿಲ್ಪ ಶಾಸ್ತ್ರ, ವ್ಯಾವಹಾರಿಕ ರಸಾಯನಶಾಸ್ತ್ರ, ಕೃಷಿವಿದ್ಯೆ, ವಾಣಿಜ್ಯ ಮುಂತಾದುವುಗಳನ್ನು ವಿದ್ಯಾರ್ಥಿಗಳಿಗೆ ಚೆನ್ನಾಗಿ ಕಲಿಸಿ, ನಮ್ಮ ದೇಶದಲ್ಲಿರುವ ಅಪಾರವಾದ ಸಾಧನಸಂಪತ್ತಿಗಳಿಂದ ಬಹಳ ಪ್ರಯೋಜನವಾಗುವಂತೆ ಮಾಡಬೇಕು. ಪ್ರಪಂಚದ ಕೈಗಾರಿಕೆಗಳಿಗೂ ವ್ಯಾಪಾರಗಳಿಗೂ ಮುಖಂಡರಾಗಬಹುದಾದ ಸಮರ್ಥರು ನಮ್ಮಲ್ಲಿ ಕ್ಷಿಪ್ರದಲ್ಲಿಯೇ ತಲೆದೋರುವಂತೆ ಮಾಡಬೇಕು.

"ನಮ್ಮ ದೇಶದಲ್ಲಿ ಹೆಚ್ಚು ವಿದ್ಯೆಯನ್ನು ಕಲಿಸುತ್ತಿರುವರೆಂದು ಅಲ್ಲಲ್ಲಿ ಹೇಳಿಕೊಳ್ಳುತ್ತಾರೆ. ಆದರೆ ಇತರ ದೇಶಗಳೊಡನೆ ನಮ್ಮ ದೇಶವನ್ನು ಹೋಲಿಸಿನೋಡಿದರೆ ನಮ್ಮಲ್ಲಿ ವಿದ್ಯೆ ಬಹಳ ಕಡಿಮೆಯಾಗಿರುವುದು ತಿಳಿಯ ಬರುತ್ತದೆ. ನಮ್ಮಲ್ಲಿ ವಿದ್ಯೆ ಹೆಚ್ಚಾಗಿಲ್ಲ, ತಪ್ಪುದಾರಿಯಲ್ಲಿ ಹೋಗುತ್ತಿದೆ. ನಮ್ಮ ದೇಶದ ಸ್ಥಿತಿಗತಿಗಳಿಗೆ ತಕ್ಕಂತೆ ಜನರಿಗೆ ವಿದ್ಯಾಭ್ಯಾಸ ಮಾಡಿಸುತ್ತಿಲ್ಲ. ಓದುವುದೆಲ್ಲ ಸರಕಾರಿ ಕೆಲಸಕ್ಕಾಗಿಯೇ ಎಂದು ಜನರ ಭಾವನೆಯಾಗಿದೆ. ಆ ಭಾವನೆ ಮೊದಲು ತಪ್ಪಬೇಕು. ಜನರಿಗೆ ಕೈಗಾರಿಕೆಯ ಕೆಲಸಗಳಲ್ಲಿ ಬುದ್ಧಿ ಹುಟ್ಟಬೇಕು. ಕಷ್ಟಪಟ್ಟು ದೇಹಶ್ರಮದಿಂದ ಕೆಲಸಮಾಡುವುದರಲ್ಲಿ ಕೂಡ ಗೌರವವಿದೆಯೆಂದು ಜನರಿಗೆ ಚೆನ್ನಾಗಿ ತಿಳಿಯಬೇಕು. ಈ ಉದ್ದೇಶದಿಂದ ಜನರಿಗೆ ಉದಾರವಾದ ವಿದ್ಯೆಯನ್ನು ಕಲಿಸಬೇಕು."

ಅನಂತರ ಶ್ರೀಮನ್ಮಹಾರಾಜರವರು ಪ್ರಶಸ್ತಿ ಪಡೆದ ವಿದ್ಯಾರ್ಥಿಗಳಿಗೆ ಕೆಲವು ಹಿತೋಪದೇಶಗಳನ್ನು ಮಾಡಿದರು. ಅವರ ಭಾಷಣದಲ್ಲಿ, "ನೀವು ಯಾವ ಕೆಲಸ ಮಾಡಿದರೂ ಕ್ರಮದಿಂದ ಕಟ್ಟಿಗೊಳಪಟ್ಟು ಮಾಡಬೇಕು. ಯಾರು ತಮ್ಮ ಹಿರಿಯರಿಗೆ ವಿಧೇಯರಾಗಿರುವುದರಲ್ಲಿ ದಕ್ಷರೋ ಅವರು ಇತರರನ್ನು ತಮ್ಮ ಕೈಕೆಳಗಿಟ್ಟುಕೊಂಡು ದರ್ಪದಿಂದ ಅಧಿಕಾರ ನಡೆಸಲು ದಕ್ಷರಾಗುವರು. ನೀವೆಲ್ಲರೂ ಮತಧರ್ಮದ ನಿಜತತ್ತ್ವವನ್ನು ಚೆನ್ನಾಗಿ ಗ್ರಹಿಸಿ ಮನಸ್ಸನ್ನು ಪರಿಪಕ್ವಪಡಿಸಿಕೊಳ್ಳಬೇಕು. ನಿಮ್ಮನ್ನು ಸೃಷ್ಟಿಸಿದ ದೇವರಿಗೂ ನಿಮ್ಮ ಒಡನಾಡುವ ಜನರಿಗೂ ನೀವು ಋಣಿಗಳಾಗಿದ್ದೀರೆಂಬುದನ್ನು ತಿಳಿದು ಕರ್ತವ್ಯದಲ್ಲಿ ಮನಸ್ಸಿಡಬೇಕು. ತ್ರಿಕರಣದಲ್ಲಿಯೂ (ಎಂದರೆ ಮಾತಿನಲ್ಲಿಯೂ, ಮನಸ್ಸಿನಲ್ಲಿಯೂ, ಕಾರ್ಯದಲ್ಲಿಯೂ) ಪರಿಶುದ್ಧರಾಗಿ ಸದ್ಗುಣವಂತರಾಗಿ ಬಾಳಬೇಕು. ಇಷ್ಟೇ ಅಲ್ಲ ; ತಕ್ಕಷ್ಟು ಉತ್ಸಾಹವೂ ನಿಮ್ಮಲ್ಲಿ ಇರಬೇಕು. ಸೂಕ್ಷ್ಮಬುದ್ಧಿಯುಳ್ಳವರಿಗಿಂತಲೂ ಉತ್ಸಾಹಶಾಲಿಗಳಾದವರು ಈಗ ನಮ್ಮ ದೇಶಕ್ಕೆ ಮುಖ್ಯವಾಗಿ ಬೇಕಾಗಿದೆ. ದೃಢಮನಸ್ಕರಾಗಿಯೂ, ಕಾರ್ಯದಕ್ಷರಾಗಿಯೂ, ದೇಶಸೇವೆಯಲ್ಲಿ ನಿರತರಾಗಿಯೂ

ಇರತಕ್ಕವರು ನಮಗೆ ಬೇಕಾಗಿದೆ. ಏನೇ ಬರಲಿ, ಮನಸ್ಸಾಕ್ಷಿಗೆ ವಿರೋಧವಾಗಿ ನಡೆಯದಿರತಕ್ಕವರು ಬೇಕು. ಹರಿದ್ವಾರದ ಗುರುಕುಲ ಪೀಠದಿಂದ ಬರತಕ್ಕ ವಿದ್ಯಾರ್ಥಿಗಳಂತೆ ಉತ್ಸಾಹಶೀಲರಾಗಿಯೂ, ದೇಶಸೇವಾನಿರತರಾಗಿಯೂ ಇರಬೇಕು. ಈ ದೇಶದ ವಿಶ್ವವಿದ್ಯಾಪೀಠಗಳ ಯೋಗ್ಯತೆಯನ್ನು ನಿಶ್ಚಯಿಸಬೇಕಾದರೆ ಮುಖ್ಯವಾದ ಎರಡು ವಿಷಯಗಳಿವೆ. ಯಾವುವೆಂದರೆ:-ಮೊದಲನೆಯದು, ಎಷ್ಟು ಹೊಸ ವಿಷಯಗಳನ್ನು ಶೋಧಿಸಿ ಕಂಡುಹಿಡಿದಿರುವುದು, ಶಾಸ್ತ್ರಕಲೆಗಳಲ್ಲಿ ಎಷ್ಟುದೂರ ಅಭಿವೃದ್ಧಿ ಹೊಂದಿರುವರು, ಎಂಬುದು. ಎರಡನೆಯದು, ವಿಶ್ವವಿದ್ಯಾಪೀಠದಲ್ಲಿ ಓದಿ ಬಂದವರು ಎಷ್ಟುದೂರ ಜಾತಿಕುಲಗಳ ಭೇದವಿಡದೆ ತಮ್ಮ ದೇಶೀಯರಿಗೆಲ್ಲ ಉಪಕಾರಿಗಳಾಗಿ ಭರತಖಂಡದ ಕ್ಷೇಮಕ್ಕಾಗಿ ಎಷ್ಟರಮಟ್ಟಿಗೆ ಆಸಕ್ತಿಯನ್ನು ಇಟ್ಟುಕೊಂಡಿರುವರು, ಎಂಬುದು ಈ ಕಾಶೀ ವಿಶ್ವವಿದ್ಯಾಪೀಠದ* ಹೆಸರನ್ನು ಹೇಳಿದ ಮಾತ್ರದಿಂದಲೇ ಸರ್ವತ್ರ ಪೂಜ್ಯಭಾವವುಂಟಾಗು ವಂತೆ ಇಲ್ಲಿಯ ವಿದ್ಯಾರ್ಥಿಗಳು ನಡೆದುಕೊಳ್ಳುವುದಲ್ಲದೆ, ಇಲ್ಲಿ ಕಲಿಸುವ ಐಹಿಕವಿದ್ಯೆಗಳೂ ಅಷ್ಟರಮಟ್ಟಿಗೆ ಉತ್ಕೃಷ್ಟವಾಗಿರಬೇಕು. ಈ ವಿಶ್ವವಿದ್ಯಾಪೀಠವನ್ನು ಮೊದಲು ದೇಶದೃಷ್ಟಿ ಯಿಂದ ನೋಡಬೇಕು, ಎಂದರೆ ಭರತಖಂಡದ ಎಲ್ಲಾ ಜನರಿಗೂ ಇದು ಅನ್ವಯಿಸುವಂತೆ ಮಾಡಬೇಕು ; ಅನಂತರವೇ ಇದನ್ನು ಆರ್ಯಮತ ದೃಷ್ಟಿಯಿಂದ ನೋಡಬೇಕು. ಈ ವಿಶ್ವವಿದ್ಯಾಪೀಠವನ್ನು ಹೀಗೆ ವಿವೇಕದಿಂದ ನಡೆಯಿಸಿಕೊಂಡು ಬಂದಲ್ಲಿ, ಕಾಲಕ್ರಮದಲ್ಲಿ ಇದನ್ನು ಭರತಖಂಡದ ಯಾವ ಜಾತಿಯವರೇ ಆಗಲಿ 'ತಮ್ಮದು' ಎಂದು ಹೆಮ್ಮೆಯಿಂದ ಹೇಳಿಕೊಳ್ಳುವಂತಾಗುವುದರಲ್ಲಿ ಸಂದೇಹವಿಲ್ಲ." ಎಂದು ಮೊದಲಾಗಿ ಅಪ್ಪಣೆಕೊಡಿಸಿದರು.

ಆಳುವ ಮಹಾಸ್ವಾಮಿಯವರ ಕಾಲದಲ್ಲಿ ಸಂಸ್ಥಾನದ ಕೈಗಾರಿಕೆಗಳು ಹೆಚ್ಚಿ, ವ್ಯಾಪಾರವು ವಿಶೇಷ ಮುಂದುವರಿಯುತ್ತಲಿದೆ. ಗಂಧದೆಣ್ಣೆಯ ಕಾರ್ಖಾನೆ, ಸಾಬೂನಿನ ಕಾರ್ಖಾನೆ, ಕಬ್ಬಿಣದ ಕಾರ್ಖಾನೆ, ಸಕ್ಕರೆಯ ಕಾರ್ಖಾನೆ, ಪಿಂಗಾಣಿಯ ಸಾಮಾನು ತಯಾರಿಸುವ ಕಾರ್ಖಾನೆ ಮೊದಲಾದುವನ್ನು ಸರಕಾರದವರೇ ಸ್ಥಾಪಿಸಿದ್ದಾರೆ. ಈಚೆಗೆ ಚೆನ್ನಪಟ್ಟಣದ ಬಳಿ ಜೂಟ್ ರೇಷ್ಮೆಯ ಕಾರ್ಖಾನೆಯನ್ನೂ, ಭದ್ರಾವತಿಯ ಬಳಿ ಕಾಗದ ಕಾರ್ಖಾನೆಯನ್ನೂ ಸ್ಥಾಪಿಸುವ ಏರ್ಪಾಡು ನಡೆಯುತ್ತಲಿದೆ. ಈ ಎರಡು ಕಾರ್ಖಾನೆಗಳ ಶಂಕುಸ್ಥಾಪನಾಮಹೋತ್ಸವಗಳನ್ನು ಶ್ರೀಮನ್ಮಹಾರಾಜರವರು ತಮ್ಮ ಅಮೃತಹಸ್ತದಿಂದ ನೆರವೇರಿಸಿದರು.

ಕಾವೇರಿ ನದಿಯ ನೀರಿನಿಂದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ, ಕೋಲಾರದ ಚಿನ್ನದ ಗಣಿಗಳಿಗೂ, ಬೆಂಗಳೂರು, ಮೈಸೂರು, ಚೆನ್ನಪಟ್ಟಣ, ನಂಜನಗೂಡು, ಶ್ರೀರಂಗಪಟ್ಟಣ, ಕ್ಲೋಸ್‌ಪೇಟೆ, ಆನೆಕಲ್ಲು, ಚಿಕ್ಕಬಳ್ಳಾಪುರ, ಅಗರಂ, ದೇವನಹಳ್ಳಿ, ದೊಡ್ಡಬಳ್ಳಾಪುರ ಮೊದಲಾದ ಸ್ಥಳಗಳಲ್ಲಿ ದೀಪಗಳಿಗೂ, ಬಗೆಬಗೆಯ ಕಾರ್ಖಾನೆಗಳ ಕೆಲಸಗಳಿಗೂ ಉಪಯೋಗಿಸುತ್ತಿದ್ದಾರೆ. ಗೇರುಸೊಪ್ಪೆಯಲ್ಲಿಯೂ ವಿದ್ಯುಚಕ್ತಿಯನ್ನು

---

*ಕಾಶೀ ವಿಶ್ವವಿದ್ಯಾಪೀಠದ ಇಪ್ಪತ್ತನೆಯ ಪದವೀದಾನ ಮಹೋತ್ಸವವು ೧೯೩೭ನೆಯ ಡಿಸೆಂಬರು ೨೮ನೆಯ ತಾರೀಖಿನ ದಿನ ನಡೆಯಿತು. ಆ ದಿನ ನಮ್ಮ ಮಹಾರಾಜರವರಿಗೆ 'ಡಾಕ್ಟೊರೇಟ್' ಪದವಿಯನ್ನು ಕೊಟ್ಟು ಗೌರವಿಸಿದರು.

ಉತ್ಪತ್ತಿಮಾಡುವ ಏರ್ಪಾಡು ನಡೆಯುತ್ತಲಿದೆ. ವಾಣಿಜ್ಯ ಮತ್ತು ಕೈಗಾರಿಕೆಗಳ ಅಭಿವೃದ್ಧಿಗಾಗಿ ಸಂಸ್ಥಾನದ ಅನೇಕ ಕಡೆಗಳಲ್ಲಿ ಆಗಾಗ' ವಸ್ತುಪ್ರದರ್ಶನಗಳನ್ನು ನಡೆಯಿಸುತ್ತಿರುವುದಲ್ಲದೆ, ಮೈಸೂರು ಸರಕಾರದವರು ಪ್ರತಿ ವರ್ಷವೂ ದಸರಾಮಹೋತ್ಸವಕಾಲದಲ್ಲಿ ಮೈಸೂರಿನಲ್ಲಿ ಒಂದು ಪ್ರದರ್ಶನವು ಅತ್ಯುತ್ತಮ ರೀತಿಯಲ್ಲಿ ನಡೆಯುವಂತೆ ಏರ್ಪಡಿಸಿರುವರು.

ಸಂಸ್ಥಾನದ ಅನೇಕ ಕಡೆಗಳಲ್ಲಿ ಹೊಸದಾಗಿ ರಾಜಮಾರ್ಗಗಳನ್ನು ಏರ್ಪಡಿಸಿ, ಅವಶ್ಯವಾದೆಡೆಗಳಲ್ಲಿ ಸೇತುವೆಗಳನ್ನು ಕಟ್ಟಿಸಿದ್ದಾರೆ. ರೈಲು ಮಾರ್ಗಗಳೂ ಹೆಚ್ಚಿವೆ. ಮೈಸೂರು-ಅರಸೀಕೆರೆ, ನಂಜನಗೂಡು- ಚಾಮರಾಜನಗರ- ಚಿತ್ರದುರ್ಗ, ಚಿಕ್ಕಜಾಜೂರು, ಶಿವಮೊಗ್ಗ-ಅರಸಾಳು, ಬೆಂಗಳೂರು- ಕೋಲಾರ- ಬೌರಿಂಗ್‌ಪೇಟೆ ರೈಲುಗಳೆಲ್ಲಾ ಆಳುವ ಮಹಾಸ್ವಾಮಿಯವರ ಕಾಲದಲ್ಲಿ ಏರ್ಪಾಡಾದುವು.

ಕೆಲವು ವರ್ಷಗಳ ಹಿಂದೆ ಮೈಸೂರು ಸರಕಾರದವರು ಬೀರೂರು-ಶಿವಮೊಗ್ಗ ರೈಲನ್ನೂ, ಬೆಂಗಳೂರು-ನಂಜನಗೂಡು ರೈಲನ್ನೂ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು, ಅವುಗಳ ಆಡಳಿತವನ್ನು ನಿರ್ವಹಿಸುತ್ತಲಿದ್ದಾರೆ. ೧೯೩೮ನೆಯ ಜನವರಿಯಿಂದ ಇವರು ಬೆಂಗಳೂರು-ಹರಿಹರ, ಬೆಂಗಳೂರು-ಹಿಂದೂಪುರದವರೆಗಿರುವ ರೈಲನ್ನೂ, ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು, ಅದರ ಆಡಳಿತಗಳನ್ನೂ ತಾವೇ ನೋಡಿಕೊಳ್ಳುತ್ತಲಿರುವರು. ಈ ಸಂಸ್ಥಾನದ ಅಧಿಕಾರಕ್ಕೆ ಒಳಪಟ್ಟಿರುವ ರೈಲುಗಳನ್ನು ಒಟ್ಟು ಗೂಡಿಸಿ, 'ಮೈಸೂರು ಸ್ಟೇಟ್ ರೈಲ್ವೆ' ಎಂದು ಇದಕ್ಕೆ ನಾಮಕರಣ ಮಾಡಿದ್ದಾರೆ. ಇದು ಒಟ್ಟು ೭೩೨ ಮೈಲಿಗಳ ಉದ್ದವಿದೆ. ಇದು ಇಂಡಿಯದಲ್ಲಿ ಪ್ರಥಮ ತರಗತಿಗೆ ಸೇರಿದ ರೈಲುಗಳಲ್ಲಿ ಒಂದಾಗಿದೆ.

ಪ್ರಯಾಣಕ್ಕೆ ಸೌಕರ್ಯಗಳನ್ನು ಒದಗಿಸಿಕೊಡುವುದರ ಮೂಲಕ ವ್ಯಾಪಾರವನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಸಂಸ್ಥಾನದ ಅನೇಕ ಕಡೆಗಳಲ್ಲಿ ಸೇತುವೆಗಳನ್ನು ಕಟ್ಟಿಸುತ್ತಿದ್ದಾರೆ. ಇದುವರೆಗೆ ಹೊನ್ನಾಳಿಯಲ್ಲಿ ತುಂಗಭದ್ರಾ ನದಿಗೂ, ದೋರನಹಳ್ಳಿಯ ಹತ್ತಿರ ಲಕ್ಷ್ಮಣತೀರ್ಥಕ್ಕೂ, ಗೋರಿಯಪಾಳ್ಯ ಮತ್ತು ಅಕ್ಕಿಹೆಬ್ಬಾಳು ಪ್ರದೇಶಗಳಲ್ಲಿ ಹೇಮಾವತೀನದಿಗೂ, ತಿರುಮಕೂಡಲು ನರಸೀಪುರದ ಹತ್ತಿರ ಕಾವೇರಿ ಕಪಿನೀ ನದಿಗಳಿಗೂ, ರಾಮನಾಥ ಪುರದ ಬಳಿ ಕಾವೇರಿ ನದಿಗೂ, ಸೇತುವೆಗಳನ್ನು ಕಟ್ಟಿಸಿ, ಮಾರ್ಗಸೌಕರ್ಯಗಳನ್ನು ಹೆಚ್ಚಿಸಿರುತ್ತಾರೆ. ಕುಣಿಗಲ್ ತಾಲ್ಲೂಕು ಮಾರ್ಕೋನಹಳ್ಳಿಯ ಹತ್ತಿರ ಷಿಂಷಾನದಿಗೆ ಒಂದು ಜಲಾಶಯವನ್ನು ನಿರ್ಮಿಸಬೇಕೆಂದು ಗೊತ್ತುಮಾಡಿ ಇದರ ಶಂಕುಸ್ಥಾಪನಾಮಹೋತ್ಸವವನ್ನು ಶ್ರೀಮನ್ಮಹಾರಾಜರವರು ೧೯೩೮ನೆಯ ಜನವರಿ ೨೦ನೆಯ ತಾರೀಖಿನ ದಿನ ಸ್ವಹಸ್ತದಿಂದ ನೆರವೇರಿಸಿದರು. ಇದರಿಂದ ಹತ್ತು ಸಾವಿರ ಎಕರೆಗಳ ಜಮೀನು ಸಾಗುವಳಿಗೆ ಅನುಕೂಲವಾಗುವುದು. ಇನ್ನೂ ತುಂಗಾ, ಭದ್ರಾ, ಅರ್ಕಾವತೀ, ಕಪಿನೀ, ವೇದಾವತೀ, ವರದಾ, ಶರಾವತೀ ನದಿಗಳಿಗೆ ಸೇತುವೆಗಳು ನಿರ್ಮಾಣವಾಗಬೇಕಾಗಿದೆ. ಈ ಸೇತು ಬಂಧನದ ಕಾರ್ಯದಲ್ಲಿ ಶ್ರೀಮನ್ಮಹಾರಾಜರವರೂ ತೀವ್ರಾಸಕ್ತರಾಗಿರುವುದರಿಂದಲೂ, ಇಂಡಿಯ ಸರಕಾರದವರೂ ಈಚೆಗೆ ಕೆಲವು ಸೇತುವೆಗಳ

ನಿರ್ಮಾಣದ ವಿಚಾರದಲ್ಲಿ ಪ್ರೋತ್ಸಾಹಿಸುತ್ತಿರುವುದರಿಂದಲೂ, ಇವು ಕ್ಷಿಪ್ರದಲ್ಲಿಯೇ ಫಲಕಾರಿಗಳಾಗುವುದೆಂದು ಧಾರಾಳವಾಗಿ ಹೇಳಬಹುದು.

ಭರತಖಂಡದ ರಾಜಮಾರ್ಗಗಳ ಸಮ್ಮೇಳನವೊಂದು ಬೆಂಗಳೂರಿನಲ್ಲಿ ೧೯೩೭ನೆಯ ಜನವರಿ ತಿಂಗಳಲ್ಲಿ ನಡೆಯಿತು. ಈ ಸಂದರ್ಭದಲ್ಲಿ ಮಾರ್ಗಗಳಿಗೆ ಸಂಬಂಧಪಟ್ಟ ನೂರಾರು ಸಮಸ್ಯೆಗಳು ಚರ್ಚಿಸಲ್ಪಟ್ಟುವು.

ಕೈಗಾರಿಕೆಗಳ ಅಭ್ಯಿವೃದ್ದಿಗೆ ಶಾಸ್ತ್ರಜ್ಞಾನವು ಅತ್ಯಾವಶ್ಯಕವೆಂದು ತಿಳಿದು, ಸುಪ್ರಸಿದ್ಧರಾದ ದಿವಂಗತ ಜೆ. ಎನ್. ತಾತಾ ಅವರು "ಇಂಡಿಯನ್ ಇನ್ಸಿಟಿಟ್ಯೂಟ್ ಆಫ್ ಸೈನ್ಸ್" ಎಂಬ ಶಾಸ್ತ್ರಾನ್ವೇಷಣ ಶಾಲೆಯನ್ನು ಬೆಂಗಳೂರು ಬಳಿ ಸ್ಥಾಪಿಸಿದರು. ಇದಕ್ಕೆ, ಆಳುವ ಮಹಾಸ್ವಾಮಿಯವರು ಉದಾರಾಶ್ರಯವನ್ನಿತ್ತು, ೧೯೧೧ರಲ್ಲಿ ಇದರ ಶಂಖುಸ್ಥಾಪನೆಯನ್ನು ಮಾಡಿದರು. ಈಗ ವರ್ಷಂಪ್ರತಿ ಮೂವತ್ತು ಸಾವಿರ ರೂಪಾಯಿಗಳನ್ನು ಗ್ರಾಂಟು ಕೊಡುತ್ತಲಿದ್ದಾರೆ. ಇಲ್ಲಿ ೧೯೩೭-೩೮ರಲ್ಲಿ ೧೮೪ ಮಂದಿ ವಿದ್ಯಾರ್ಥಿಗಳಿದ್ದರು.

ಪ್ರಜೆಗಳ ಆರೋಗ್ಯರಕ್ಷಣೆಯ ವಿಚಾರದಲ್ಲಿಯೂ ನಮ್ಮ ಮಹಾರಾಜರವರು ವಿಶೇಷ ಆಸಕ್ತಿಯನ್ನು ವಹಿಸಿ, ಅನೇಕ ಉತ್ತಮವಾದ ಏರ್ಪಾಡುಗಳನ್ನು ಮಾಡಿರುತ್ತಾರೆ. ಮಲೆನಾಡಿನ ಅಭಿವೃದ್ಧಿಗೆ ಅತ್ಯಾವಶ್ಯಕವಾಗಿ ಕೈಕೊಳ್ಳಬೇಕಾದ ಕಾರ್ಯಕ್ರಮಗಳನ್ನು ಸೂಚಿಸಲು ೧೯೩೧ರಲ್ಲಿ ಮೈಸೂರು ಸರಕಾರದವರು ಒಂದು ಸಮಿತಿಯನ್ನು ರಚಿಸಿದರು. ಈ ಸಮಿತಿಯವರು ಕೊಟ್ಟಿರುವ ಸಲಹೆಗಳಲ್ಲಿ ಕೆಲವನ್ನು ಆಗಲೇ ಕಾರ್ಯರಂಗಕ್ಕೆ ತಂದಿರುವರು. ಸಂಸ್ಥಾನದ ಅನೇಕ ಕಡೆಗಳಲ್ಲಿ ಆಸ್ಪತ್ರೆಗಳನ್ನು ಸ್ಥಾಪಿಸಿದ್ದಾರೆ. ಕೆಲವು ಆಸ್ಪತ್ರೆ ಗಳಲ್ಲಿ ಕಣ್ಣು, ಗಂಟಲು, ಮೂಗು, ಕಿವಿ ಮೊದಲಾದುವುಗಳ ರೋಗಗಳಿಗಾಗಿಯೇ ಬೇರೆ ಬೇರೆ ಶಾಖೆಗಳನ್ನು ಏರ್ಪಡಿಸಿ, ಏಕ್(x) ರೇ ಪರೀಕ್ಷೆಗೂ ಸೌಕರ್ಯಗಳನ್ನುಂಟು ಮಾಡಿದ್ದಾರೆ. ವರ್ಷಕ್ಕೊಂದು ಸಲ ಮಕ್ಕಳ ಪ್ರದರ್ಶನಗಳನ್ನು ಏರ್ಪಡಿಸಿ, ಆರೋಗ್ಯ ವಾಗಿಯೂ ದೃಢಕಾಯರಾಗಿಯೂ ಇರುವ ಮಕ್ಕಳಿಗೆ ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಲಿರುವರು.

ಮೆದುಳು ರೋಗಗಳ ಚಿಕಿತ್ಸೆಗಾಗಿಯೇ ಒಂದು ಆಸ್ಪತ್ರೆಯನ್ನು ಬೆಂಗಳೂರು ನಗರದ ಬಳಿ ಸರಕಾರದವರು ಆರು ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿ ಕಟ್ಟಿಸಿದ್ದಾರೆ. ಇಲ್ಲಿ ಮುನ್ನೂರು ಮಂದಿ ಆಸ್ಪತ್ರೆಯಲ್ಲಿದ್ದು ಚಿಕಿತ್ಸೆ ಪಡೆಯಲು ಅನುಕೂಲವಿದೆ. ವಾಂತಿಭೇದಿ, ಸಿಡುಬು, ಪ್ಲೇಗು ಮುಂತಾದ ಸಾಂಕ್ರಾಮಿಕ ರೋಗಗಳು ಬಲುಮಟ್ಟಿಗೆ ಕಡಿಮೆಯಾಗಿದೆ.

ಸಂಸ್ಥಾನದ ನಾನಾ ಭಾಗಗಳಲ್ಲಿ ಉದ್ಯಾನವನಗಳನ್ನು ನಿರ್ಮಿಸಿ, ಪ್ರಜೆಗಳಿಗೆ ಸುಖಸಂತೋಷಗಳನ್ನುಂಟುಮಾಡುವುದರಲ್ಲಿಯೂ ಸರಕಾರದವರು ಶ್ರದ್ಧೆ ವಹಿಸಿದ್ದಾರೆ. ಬೆಂಗಳೂರಿನಲ್ಲಿ ಕಬ್ಬನ್‌ಪಾರ್ಕ್ ಮತ್ತು ಲಾಲ್‌ಬಾಗೂ, ಮೈಸೂರಿನಲ್ಲಿ ಕರ್ಜನ್‌ಪಾರ್ಕ್, ನಿಷದ್‌ಬಾಗ್, ಸ್ಟ್ಯಾಚುಸ್ಕ್ವೇರ್ ಮತ್ತು ಜೂ ಎಂಬ ಪ್ರಾಣಿಗಳ ಪ್ರದರ್ಶನಾಲಯವೂ, ಶ್ರೀರಂಗಪಟ್ಟಣದ ಬಳಿ ಇರುವ ದರಿಯಾದೌಲತ್‌ಬಾಗೂ, ಕೃಷ್ಣರಾಜಸಾಗರದ ಬೃಂದಾವನವೂ ಬಲುಮಟ್ಟಿಗೆ ಪ್ರಸಿದ್ಧಿ ಪಡೆದಿವೆ. ಶ್ರೀಮಂತರೂ ತಮ್ಮ ಬಂಗಲೆಗಳಲ್ಲಿ

ತೋಟಗಳನ್ನು ಉತ್ತಮರೀತಿಯಲ್ಲಿಟ್ಟುಕೊಳ್ಳಲು ಸರಕಾರದವರು ಪ್ರೋತ್ಸಾಹವನ್ನು ಕೊಡುತ್ತಲಿರುವರು. ವರ್ಷಕ್ಕೆ ಎರಡಾವೃತ್ತಿ ಬೆಂಗಳೂರು ಲಾಲ್‌ಬಾಗಿನಲ್ಲಿ ಫಲಪುಷ್ಪಗಳ ಪ್ರದರ್ಶನವು ನಡೆದು, ಶ್ರೇಷ್ಠವಾದುವುಗಳಿಗೆ ಬಹುಮಾನಗಳು ದೊರೆಯುತ್ತಿವೆ.

ಸಂಸ್ಥಾನದ ಅಧಿಕಾರಿಗಳೂ, ಇತರ ನೌಕರರೂ ಜೀವವಿಮೆ ಮಾಡುವ ಏರ್ಪಾಡು ೧೮೯೧ರಲ್ಲಿ ಪ್ರಾರಂಭವಾಯಿತು. ಜೀವವಿಮೆ ಮಾಡುವುದರ ಪ್ರಯೋಜನಗಳು ಅನೇಕರಿಗೆ ತಿಳಿಯುತ್ತ ಬಂದುದರಿಂದ, ಪ್ರಜೆಗಳ ಇಷ್ಟದ ಮೇರೆಗೆ, ಜನಸಾಮಾನ್ಯದ ಜೀವವಿಮೆ‌ಗಾಗಿಯೂ ೧೯೧೧ರಲ್ಲಿ ಏರ್ಪಾಡು ಮಾಡಲಾಯಿತು. ಈ ವಿಮೆಯ ಇಲಾಖೆಯ ಕೆಲಸವು ಬಲು ತೃಪ್ತಿಕರವಾಗಿ ನಡೆಯುತ್ತಲಿದೆ. ಈ ಇಲಾಖೆಯ ಕಛೇರಿಗಾಗಿ ಬೆಂಗಳೂರಿನಲ್ಲಿ ಒಂದು ಹೊಸ ಕಟ್ಟಡವನ್ನೇ ಕಟ್ಟಿರುತ್ತಾರೆ.

ಸರಕಾರದವರು ಸ್ಥಾಪಿಸಿರುವ ನೌಕರರ ಮತ್ತು ಪ್ರಜೆಗಳ ವಿಮೆಯ ಶಾಖೆಗಳಲ್ಲಿ ಬಹುಮಂದಿ ಜೀವವಿಮೆ ಮಾಡಿರುವುದಲ್ಲದೆ, ಸಂಸ್ಥಾನದ ಪ್ರಜೆಗಳು ಇತರ ಅನೇಕ ಖಾಸಗಿ ಜೀವವಿಮೆಯ ಕಂಪೆನಿಗಳಲ್ಲಿಯೂ ಪಾಲಿಸಿಗಳನ್ನು ಪಡೆದಿದ್ದಾರೆ. ಈಚೆಗೆ ನಮ್ಮ ದೇಶದಲ್ಲಿಯೇ 'ಮೈಸೂರು ಇನ್‌ಷೂರೆನ್ಸ್ ಕಂಪೆನಿ' ಎಂಬ ಒಂದು ಹೊಸಸಂಸ್ಥೆ ೧೯೩೪ರಲ್ಲಿ ಸ್ಥಾಪಿತವಾಯಿತು. ಇದರ ಪ್ರಾರಂಭೋತ್ಸವವನ್ನು ಆಗ ಸಂಸ್ಥಾನದ ದ್ವಿತೀಯ ಸಚಿವರಾಗಿದ್ದ ಶ್ರೀಯುತ ಎಸ್. ಪಿ. ರಾಜಗೋಪಾಲಾಚಾರಿ, ಬಿ. ಎ.,ಬಿ.ಎಲ್., ಅವರು ನೆರವೇರಿಸಿ, ಈ ಕಂಪೆನಿಯು ಸಾರೋದ್ಧಾರವಾಗಿ ನಡೆಯಲೆಂದು ಹರಸಿದರು.

ಪ್ರಜೆಗಳ ಸೌಕರ್ಯಕ್ಕಾಗಿ ಸಂಸ್ಥಾನದಲ್ಲೆಲ್ಲಾ ಸಹಕಾರಸಂಘಗಳನ್ನು ಸರಕಾರದವರು ಸ್ಥಾಪಿಸಿರುತ್ತಾರೆ. 'ಏಪೆಕ್ಸ್ ಬ್ಯಾಂಕ್' ಎಂಬ ಪ್ರಧಾನ ಬ್ಯಾಂಕೊಂದು ನಿರ್ಮಿತವಾಗಿದೆ. ಖಾಸಗಿ ಜನರೂ ಆಯಾ ಪಂಗಡದ ಹೆಸರಿನಲ್ಲಿ, 'ಆರ್ಯವೈಶ್ಯ ಬ್ಯಾಂಕ್', 'ದೇವಾಂಗ ಬ್ಯಾಂಕ್', 'ಕಣೆಯರ ಬ್ಯಾಂಕ್' ಇವೇ ಮೊದಲಾದ ಬ್ಯಾಂಕುಗಳನ್ನು ಸ್ಥಾಪಿಸಿರುತ್ತಾರೆ.

ಸರಕಾರಿ ಅಧಿಕಾರಿಗಳೂ, ಇತರ ದೊಡ್ಡ ಮನುಷ್ಯರೂ ಮಿಳಿತವಾಗಿ ಸರಕಾರಿ ಆಡಳಿತದಲ್ಲಿ ಭಾಗವಹಿಸುವಂತೆ ಪ್ರಜಾಪ್ರತಿನಿಧಿಸಭೆ, ನ್ಯಾಯವಿಧಾಯಕಸಭೆ, ಅರ್ಥಸಾಧಕಸಭೆ, ಮೊದಲಾದ ಸಂಸ್ಥೆಗಳನ್ನು ಶ್ರೀಮನ್ಮಹಾರಾಜರವರು ಏರ್ಪಡಿಸಿದ್ದಾರೆ. ಕೆಲವು ಸಭೆಗಳಲ್ಲಿ ಸ್ತ್ರೀಯರೂ ಸಹ ಸದಸ್ಯರಾಗುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟು ಪ್ರೋತ್ಸಾಹಿಸಿರುವರು.

ಪ್ರಜಾಪ್ರತಿನಿಧಿಸಭೆಯು ಮೊಟ್ಟಮೊದಲು ಶ್ರೀ ದಿವಾನ್ ರಂಗಾಚಾರ್ಲು ಅವರ ಕಾಲದಲ್ಲಿ (೧೮೮೧) ಸ್ಥಾಪಿತವಾಯಿತು. ದಿವಾನರವರು ಪ್ರತಿವರ್ಷವೂ ನವರಾತ್ರಿಯ ಕಾಲದಲ್ಲಿ ಮೈಸೂರಿನಲ್ಲಿ ಈ ಸಭೆಯನ್ನು ಸೇರಿಸಿ, ಹಿಂದಿನವರ್ಷದಲ್ಲಿ ನಡೆದ ರಾಜ್ಯದಾಡಳಿತದ ವರದಿಯನ್ನು ಓದಿ, ಮುಂದಿನವರ್ಷದಲ್ಲಿ ಮಾಡಬೇಕೆಂದಿರುವ ಕಾರ್ಯಗಳನ್ನು ಸೂಚಿಸುವರು. ಹೀಗೆ ಪ್ರತಿನಿಧಿಗಳನ್ನು ಆರಿಸಿ, ಏರ್ಪಡಿಸಿದ ಸಂಸ್ಥೆಗಳಲ್ಲಿ ನಮ್ಮದೇಶದ ಪ್ರಜಾಪ್ರತಿನಿಧಿಸಭೆ ಇಂಡಿಯದೇಶದಲ್ಲೆಲ್ಲ ಮೊದಲನೆಯದು.

ಶ್ರೀ ಸರ್. ಎಂ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ ೧೯೧೬ರಲ್ಲಿ ಶ್ರೀಮನ್ಮಹಾರಾಜರವರು ಇನ್ನು ಮುಂದೆ ಪ್ರಜಾಪ್ರತಿನಿಧಿಸಭೆ ವರ್ಷಕ್ಕೆ ಎರಡುಸಲ ಸೇರಬಹುದೆಂಬ ಅನುಜ್ಞೆಯನ್ನು ದಯೆಪಾಲಿಸಿದರು. ಅದು ಮೊದಲು ಈ ಸಭೆ ನವರಾತ್ರಿಯ ಮಹೋತ್ಸವಕಾಲದಲ್ಲಿಯೂ ಶ್ರೀಮನ್ಮಹಾರಾಜರವರ ವರ್ಧಂತಿಮಹೋತ್ಸವ ಸಮಯದಲ್ಲಿಯೂ ಮೈಸೂರಿನಲ್ಲಿ ವರ್ಷಕ್ಕೆ ಎರಡುಸಲ ಸೇರುತ್ತದೆ. ಈ ಸಭೆಯ ಪ್ರತಿನಿಧಿಗಳನ್ನು ಆರಿಸುವ ವಿಚಾರದಲ್ಲಿಯೂ, ರಾಜ್ಯದಾಡಳಿತದ ಸಂಬಂಧವಾಗಿ ಪ್ರಶ್ನೆಗಳನ್ನು ಕೇಳಿ, ಉತ್ತರಗಳನ್ನು ಪಡೆಯುವ ವಿಚಾರದಲ್ಲಿಯೂ, ಸಂಸ್ಥಾನದ ಆಯವ್ಯಯವನ್ನು ಚರ್ಚಿಸುವ ವಿಚಾರದಲ್ಲಿಯೂ ಆಳುವ ಮಹಾಸ್ವಾಮಿಯವರು ಅನೇಕ ಸ್ವಾತಂತ್ರ್ಯಗಳನ್ನೂ ಅಧಿಕಾರಗಳನ್ನೂ ಕೊಟ್ಟಿರುತ್ತಾರೆ.

ನ್ಯಾಯವಿಧಾಯಕಸಭೆ ೧೯೦೭ರಲ್ಲಿ ಶ್ರೀ ವಿ. ಪಿ. ಮಾಧವರಾಯರು ದಿವಾನರಾಗಿದ್ದಾಗ ನಿರ್ಮಾಣವಾಯಿತು. ಪ್ರಜಾಪ್ರತಿನಿಧಿಸಭೆಯಿಂದ ಈ ಸಭೆಗೆ ಆರಂಭದಲ್ಲಿ ಇಬ್ಬರು ಸದಸ್ಯರನ್ನು ಆರಿಸುವಂತೆ ಏರ್ಪಾಡಾಗಿತ್ತು. ಅನಂತರ ನಾಲ್ಕುಮಂದಿಯನ್ನು ಆರಿಸಬಹುದೆಂಬ ತಿದ್ದುಪಾಟನ್ನು ಮಾಡಿ, ಸದಸ್ಯರನ್ನು ಎರಡುವರ್ಷಕ್ಕೊಂದು ಸಲ ಆರಿಸಿ ನಿಯಮಿಸುವಂತೆ ಏರ್ಪಡಿಸಿದರು. ಕ್ರಮವಾಗಿ ಈ ಸಭೆಯ ಅವಧಿಯನ್ನು ಮೂರು ವರ್ಷಗಳ ಕಾಲ ಮಾಡಿ, ಸದಸ್ಯರ ಸಂಖ್ಯೆಯನ್ನು ಐವತ್ತಕ್ಕೆ ಹೆಚ್ಚಿಸಿರುತ್ತಾರೆ.

ಪ್ರಜಾಪ್ರತಿನಿಧಿಸಭೆ ಮತ್ತು ನ್ಯಾಯವಿಧಾಯಕಸಭೆ ಇವೆರಡರಲ್ಲಿಯೂ ಒಬ್ಬರೇ ಸದಸ್ಯರಾಗಿರಲು ೧೯೩೭ ರವರೆಗೆ ಅವಕಾಶವಿತ್ತು. ಅದನ್ನು ತೆಗೆದು ಹಾಕಲಾಯಿತು. ಮತ್ತು ಪ್ರಜಾಪ್ರತಿನಿಧಿಸಭೆಯಿಂದ ಎಂಟುಮಂದಿ ಸದಸ್ಯರನ್ನು ನ್ಯಾಯವಿಧಾಯಕಸಭೆಗೆ ಆರಿಸಿ ಕಳುಹಿಸುತ್ತಿದ್ದರು. ಅದನ್ನೂ ಈಗ ತಪ್ಪಿಸಲಾಗಿದೆ. ಇದಕ್ಕೆ ಬದಲಾಗಿ ಪ್ರತಿಯೊಂದು ಡಿಸ್ಟ್ರಿಕ್ಟಿನಿಂದಲೂ ನ್ಯಾಯವಿಧಾಯಕಸಭೆಗೆ ಆರಿಸುತ್ತಿದ್ದ ಒಬ್ಬ ಸದಸ್ಯರ ಜೊತೆಗೆ ಮತ್ತೊಬ್ಬರನ್ನು ಆರಿಸಲು ಅವಕಾಶ ಕೊಡಲಾಗಿದೆ. ಈ ಬದಲಾವಣೆಯು ೧೯೩೭ನೆಯ ಮಾರ್ಚಿ ತಿಂಗಳಲ್ಲಿ ನಡೆದ ಚುನಾವಣೆಗಳಲ್ಲಿ ಆಚರಣೆಗೆ ಬಂದಿತು.

ನೂತನವಾಗಿ ರಚಿತವಾಗಿರುವ ನ್ಯಾಯವಿಧಾಯಕಸಭೆಗೆ ಹಿಂದಿನಂತೆಯೇ ಒಟ್ಟು ೫೦ ಮಂದಿ ಸದಸ್ಯರಿರುವರು. ಅವರಲ್ಲಿ ೨೮ ಸದಸ್ಯರನ್ನು ಸರಕಾರದವರೇ ಗೊತ್ತು ಮಾಡುವರು; ೨೨ ಸದಸ್ಯರನ್ನು ಪ್ರಜೆಗಳು ಆರಿಸುವರು. ಸರಕಾರದವರು ಚುನಾಯಿಸಿ ನಿಯಮಿಸಿದವರ ಪೈಕಿ ಸರಕಾರದ ಅಧಿಕಾರಿಗಳು ೨೦, ಸಾಮಾನ್ಯ ಸದಸ್ಯರು ೮, ಪ್ರಜೆಗಳು ಆರಿಸಿಕೊಂಡವರಲ್ಲಿ ಎಂಟು ಡಿಸ್ಟ್ರಿಕ್ಟುಗಳಿಂದ ೧೬ ಸದಸ್ಯರು, ಮತ್ತು ಮೈಸೂರು ಬೆಂಗಳೂರು ಮ್ಯುನಿಸಿಪಲ್ ಎಲ್ಲೆಯಿಂದ ಒಬ್ಬೊಬ್ಬ ಸದಸ್ಯರು ಇದ್ದಾರೆ. ಮೈಸೂರು ವಿಶ್ವವಿದ್ಯಾನಿಲಯ, ವಾಣಿಜ್ಯ ಮತ್ತು ವ್ಯಾಪಾರ, ಪ್ಲ್ಯಾನ್ಟಿಂಗ್ ಮತ್ತು ಲೇಬರ್ ಇವುಗಳ ಪ್ರತಿನಿಧಿಗಳಾಗಿ ನಾಲ್ವರು ಸದಸ್ಯರನ್ನು ಆರಿಸುವರು.

ಶ್ರೀ ಟಿ. ಆನಂದರಾಯರವರು ದಿವಾನರಾಗಿದ್ದಾಗ ೧೯೧೧ರಲ್ಲಿ ಅರ್ಥ ಸಾಧಕಸಭೆ ಸ್ಥಾಪಿತವಾಯಿತು. ದೇಶದ ಆರ್ಥಿಕಸ್ಥಿತಿಯನ್ನು ಅಭಿವೃದ್ಧಿ ಗೊಳಿಸುವುದಕ್ಕಾಗಿಯೆ

ಏರ್ಪಡಿಸಿದ ಈ ಸಂಸ್ಥೆಯ ಕಾರ್ಯಗಳು ಶ್ರೀಯುತ ಸರ್. ಎಂ. ವಿಶ್ವೇಶ್ವರಯ್ಯನವರ ಕಾಲದಲ್ಲಿ ಬಲುಮಟ್ಟಿಗೆ ಮುಂದುವರಿದುವು. ಈ ಸಭೆಯ ಸದಸ್ಯರು ವರ್ಷಕ್ಕೊಂದುಸಲ ಸಭೆ ಸೇರಿ, ಸಂಸ್ಥಾನದ ಆರ್ಥಿಕಸ್ಥಿತಿ ಎಷ್ಟರಮಟ್ಟಿಗೆ ಮುಂದುವರಿದಿದೆ ಎಂಬುದನ್ನು ವಿಮರ್ಶಿಸಿ, ಮುಂದೆ ನಡೆಯಬೇಕಾದ ಕಾರ್ಯಗಳನ್ನು ಪರ್ಯಾಲೋಚಿಸುವರು.

ಸಂಸ್ಥಾನದಲ್ಲಿ ಏರ್ಪಟ್ಟಿರುವ ಇತರ ಸಂಸ್ಥೆಗಳಲ್ಲಿ ಮ್ಯುನಿಸಿಪಾಲಿಟಿಗಳೂ, ಡಿಸ್ಟ್ರಿಕ್ಟುಬೋರ್ಡುಗಳೂ, ಗ್ರಾಮಪಂಚಾಯಿತಿಗಳೂ ಮುಖ್ಯವಾದುವು. ಬೆಂಗಳೂರು, ಮೈಸೂರು ನಗರಗಳಲ್ಲಿ ಪೌರಸಭಾಧ್ಯಕ್ಷರನ್ನು ಚುನಾಯಿಸುವ ಸಂಪೂರ್ಣಾಧಿಕಾರವನ್ನು ಪುರಪಾಲಕರಿಗೆ ವಹಿಸಿಬಿಟ್ಟಿದ್ದಾರೆ. ಇತರಕಡೆಗಳಲ್ಲಿ ಅಧ್ಯಕ್ಷರು ಸರಕಾರಿ ಅಧಿಕಾರಿಗಳಾಗಿದ್ದು, ಉಪಾಧ್ಯಕ್ಷರನ್ನು ಸದಸ್ಯರುಗಳೇ ಚುನಾಯಿಸುವರು. ಡಿಸ್ಟ್ರಿಕ್ಟ್‌ಬೋರ್ಡ್ ಅಧ್ಯಕ್ಷರನ್ನು ಆಯಾ ಬೋರ್ಡುಗಳ ಸದಸ್ಯರೇ ಆರಿಸುತ್ತಾರೆ. ತಾಲ್ಲೂಕು ಅಮಲ್ದಾರರೂ, ಸಬ್‌ತಾಲ್ಲೂಕು ಡೆಪ್ಯುಟಿ ಅಮಲ್ದಾರರೂ ಆಯಾ ತಾಲ್ಲೂಕು ಅಥವಾ ಸಬ್‌ತಾಲ್ಲೂಕಿನ ಮ್ಯುನಿಸಿಪಾಲಿಟಿಯ ಮುಖ್ಯಾಧಿಕಾರಿಗಳಾಗಿರುವರು. ಪ್ರತಿಗ್ರಾಮದ ಆಡಳಿತವನ್ನು ನಿರ್ವಹಿಸುವುದಕ್ಕೆ ಗ್ರಾಮಪಂಚಾಯಿತಿಯು ಏರ್ಪಟ್ಟಿದೆ. ಆಯಾ ಗ್ರಾಮದ ಮಕ್ಕಳ ವಿದ್ಯಾಭ್ಯಾಸವನ್ನು ಇವರಿಗೇ ವಹಿಸಿದೆ. ಆಯಾ ಡಿಸ್ಟ್ರಿಕ್ಟಿನ ಪ್ರಾಥಮಿಕ ವಿದ್ಯಾಭ್ಯಾಸವನ್ನು ಇವರಿಗೇ ವಹಿಸಿದೆ. ಆಯಾ ಡಿಸ್ಟ್ರಿಕ್ಟಿನ ಪ್ರಾಥಮಿಕ ವಿದ್ಯಾಭ್ಯಾಸದ ಆಡಳಿತವನ್ನು ೧೯೩೧ನೆಯ ಜುಲೈ ತಿಂಗಳಿಂದ ಆಯಾ ಡಿಸ್ಟ್ರಿಕ್ಟ್ ಬೋರ್ಡಿನವರಿಗೇ ಸರಕಾರದವರು ವಹಿಸಿಬಿಟ್ಟಿದ್ದಾರೆ.

ಮೈಸೂರಿನ ರಾಜಕೀಯ ವ್ಯವಸ್ಥೆಯಲ್ಲಿಯೂ ಆಡಳಿತ ಶಿಸ್ತಿನಲ್ಲಿಯೂ ಪ್ರಜೆಗಳಿಗೆ ಹೆಚ್ಚಿನ ಪಾತ್ರವನ್ನು ಕೊಡಬೇಕೆಂಬ ಘನೋದ್ದೇಶವು ಪ್ರಜಾವತ್ಸಲರಾದ ಶ್ರೀಮನ್ಮಹಾರಾಜರಲ್ಲಿ ಬಹುಕಾಲದಿಂದ ಬೇರೂರಿರುವುದು. ಈ ಉದ್ದೇಶವನ್ನು ಸ್ವಲ್ಪಮಟ್ಟಿಗೆ ಉಚಿತವಾದ ರೀತಿಯಲ್ಲಿ ಪ್ರಭುಗಳು ನೆರವೇರಿಸಲು, ೧೯೩೮ನೆಯ ಜನವರಿಯಲ್ಲಿ ಸೇರಿದ ನ್ಯಾಯ ವಿಧಾಯಕಸಭೆಯ ಅಧಿವೇಶನದಲ್ಲಿ ಶ್ರೀ ಡಿ. ವಿ. ಗುಂಡಪ್ಪನವರು ತಾವು ಸಭೆಯ ಮುಂದಿಟ್ಟ ನಿರ್ಣಯದ ಮೂಲಕ ಮೈಸೂರು ಫೆಡರೇಷನ್ನಿಗೆ ಸೇರುವ ವಿಷಯದಲ್ಲಿ ಇರುವ ಪ್ರಶ್ನೆಗಳನ್ನು ಪರಿಶೀಲಿಸುವುದಕ್ಕೆ ಒಂದು ಸಮಿತಿಯನ್ನು ಅಪೇಕ್ಷಿಸಿದ ಕಾಲದಲ್ಲಿ, ಸರಕಾರದವರ ಪ್ರಥಮ ಸಚಿವರು ಇದಕ್ಕಾಗಿ ಒಂದು ಸ್ಟ್ಯಾಂಡಿಂಗ್ ಕಮಿಟಿಯನ್ನು ಸ್ಥಾಪಿಸಲಾಗುವುದೆಂದು ಭರವಸೆಯಿತ್ತರು. ಈ ಭರವಸೆಯನ್ನು ಅನುಸರಿಸಿ, ಪ್ರಭುಗಳ ಸರಕಾರದವರು 'ಮೈಸೂರು ರಾಜ್ಯಾಂಗ ವ್ಯವಸ್ಥಾ ಸಮಿತಿ'* ಎಂಬುದನ್ನು ಸ್ಥಾಪಿಸಿದರು. ಅಖಿಲ ಭಾರತೀಯ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯನ್ನೂ ಮತ್ತು ಅದಕ್ಕೆ ಅನುಷಂಗಿಕವಾದ ಅಥವಾ ಸಹಾಯಕವಾದ ಸಂಗತಿಗಳನ್ನೂ ಕುರಿತು ೧೯೩೫ನೆಯ ಇಸವಿಯ ಇಂಡಿಯ ಸರಕಾರದ ಆಕ್ಟಿನಲ್ಲಿ ವಿಧಾಯಕವಾಗಿರುವ ನಿಬಂಧನೆಗಳಿಗೆ ಸಂಬಂಧಪಟ್ಟ ನಾನಾ ವಿಚಾರಗಳನ್ನೂ ಪರಿಶೀಲಿಸಿ ನೋಡಿ ಸಲಹೆಗಳನ್ನೊಪ್ಪಿಸುವುದು,

---

*ಮೈಸೂರು ರಾಜ್ಯಾಂಗ ವ್ಯವಸ್ಥಾ ಸಮಿತಿಯಲ್ಲಿ ಕಾರ್ಯದರ್ಶಿಗಳ ವಿನಾ ೧೫ ಮಂದಿ ಸದಸ್ಯರಿದ್ದಾರೆ.

ಆ ಸಮಿತಿಯವರಿಗೆ ಸರಕಾರದವರು ವಹಿಸಿದ ಕಾರ್ಯ. ಅಲ್ಲದೆ, ರಾಜಕೀಯ ವ್ಯವಸ್ಥೆ, ಆಡಳಿತದ ಶಿಸ್ತು ಮತ್ತು ಹಣಕಾಸಿನ ಸಂಬಂಧದ ಅಥವಾ ಇತರ ವಿಚಾರಗಳು-ಇವುಗಳನ್ನು ಕುರಿತು ಸರಕಾರದವರು ಆಗಿಂದಾಗ್ಗೆ ಸಮಿತಿಯವರ ಅಭಿಪ್ರಾಯಕ್ಕೆ ವಹಿಸಬಹುದಾದಂಥವುಗಳನ್ನು ಪರ್ಯಾಲೋಚಿಸಿ ವರದಿ ಮಾಡುವುದೂ ಆ ಸಮಿತಿಯವರ ಕರ್ತವ್ಯ.

ಹೀಗೆ ನೂತನ ರಾಜ್ಯಾಂಗ ವ್ಯವಸ್ಥೆಗೆ ಸಂಬಂಧಪಟ್ಟ ರಾಜಕೀಯ ವಿಚಾರಗಳನ್ನು ಪರಿಶೀಲಿಸುವುದಕ್ಕಾಗಿ ಏರ್ಪಟ್ಟ ಸಮಿತಿಯ ಮೊದಲನೆಯ ಸಭೆಯು ೧೯೩೮ನೆಯ ಏಪ್ರಿಲ್ ೧೬ನೆಯ ತಾರೀಖು, ಪ್ರಥಮ ಸಚಿವರೂ ಮತ್ತು ಸಮಿತಿಯ ಅಧ್ಯಕ್ಷರೂ ಆದ ರಾಜಮಂತ್ರ ಪ್ರವೀಣ ಶ್ರೀ ಎಸ್. ಪಿ. ರಾಜಗೋಪಾಲಾಚಾರಿ, ಬಿ. ಎ.,ಬಿ.ಎಲ್., ಅವರ ಅಧ್ಯಕ್ಷತೆಯಲ್ಲಿ ಸೇರಿತು. ಅಧ್ಯಕ್ಷರು ಆರಂಭ ಭಾಷಣವನ್ನು ಮುಗಿಸುವುದಕ್ಕೆ ಮೊದಲು, "ಈ ಸಮಿತಿಯು ಸರಕಾರಿ ಆಡಳಿತ ಯಂತ್ರದ ಸಮಗ್ರವಾದ ಮತ್ತು ಮುಖ್ಯವಾದ ಒಂದು ಅಂಗವಾಗಿ ಅಂಗೀಕೃತವಾಗುವ ಪರಿಸ್ಥಿತಿಯು ಶೀಘ್ರವಾಗಿಯೇ ಉಂಟಾಗುವುದೆಂದೂ, ಸಂಸ್ಥಾನದ ಆಡಳಿತದಮೇಲೂ ಜನಜೀವನದ ಮೇಲೂ ಸಮಿತಿಯ ಪ್ರಭಾವದಿಂದ ಬಹು ಹೆಚ್ಚಿನ ಪರಿಣಾಮವುಂಟಾಗುವುದೆಂದೂ ನಾನು ನಿರೀಕ್ಷಿಸಿದ್ದೇನೆ." ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಮೈಸೂರು ಸರಕಾರದವರು ಸಂಸ್ಥಾನದಲ್ಲಿ ವಿದ್ಯಾಭ್ಯಾಸವೂ ಪ್ರಜಾಸೇವೆಯ ಮನೋಧರ್ಮವೂ ರಾಜಕೀಯವಿಚಾರಗಳಲ್ಲಿ ಜನರ ಮನಸ್ಸಿನಲ್ಲಿ ಹೆಚ್ಚು ಹೆಚ್ಚಾಗಿ ಮೂಡುತ್ತಿರುವ ಭಾವನೆಗಳೂ ಡಿಸ್ಟ್ರಿಕ್ಟ್‌ಬೋರ್ಡುಗಳ, ಮ್ಯುನಿಸಿಪಾಲಿಟಿಗಳ ಮತ್ತು ಗ್ರಾಮಪಂಚಾಯಿತಿಗಳ ಕಾರ್ಯದಕ್ಷತೆ ಮುಂತಾದ ಪ್ರಸ್ತಾಪ ವಿಷಯಗಳೂ ಈಗ ಯಾವ ಸ್ಥಿತಿಯಲ್ಲಿರುವುವೆಂಬುದನ್ನು ಪ್ರಶಸ್ತವಾಗಿ ಪರ್ಯಾಲೋಚಿಸಿ ಸಂಸ್ಥಾನದ ರಾಜ್ಯಾಂಗ ವ್ಯವಸ್ಥೆಯ ಪುರೋಭಿವೃದ್ಧಿಯು ಅದಕ್ಕೆ ಸಂಬಂಧಪಟ್ಟವರೆಲ್ಲರ ಯೋಗಕ್ಷೇಮಗಳಿಗೂ ಸಾಧಕವಾಗುವಂತೆ ಏಕಪ್ರಕಾರವಾಗಿ ಸಾಮರಸ್ಯದಿಂದ ಸಾಗುವಂತಾಗಬೇಕಾದರೆ ಯಾವ ಯಾವ ಮಾರ್ಪಾಡುಗಳನ್ನು ಮಾಡುವುದು ಆವಶ್ಯಕವೆಂಬುದನ್ನು ನಿರ್ಧರಿಸಿ ಸಮಗ್ರವಾದ ಸಲಹೆಗಳನ್ನೊಪ್ಪಿಸುವುದಕ್ಕಾಗಿ, 'ರಾಜಕೀಯ ಸುಧಾರಣಾ ಸಮಿತಿ'* ಯನ್ನು ಏರ್ಪಡಿಸಿದರು. ಈ ಸಮಿತಿಯ ಕಾರ್ಯಕಲಾಪಗಳು ೧೯೩೮ನೆಯ ಏಪ್ರಿಲ್ ೨೮ನೆಯ ತಾರೀಖಿನ ದಿನ ಮಧ್ಯಾಹ್ನ ಪ್ರಾರಂಭವಾದುವು. ಇದರ ಅಧ್ಯಕ್ಷರಾದ ದಿವಾನ್ ಬಹದ್ದೂರ್ ರಾಜಸಭಾಭೂಷಣ ಶ್ರೀ ಕೆ. ಆರ್. ಶ್ರೀನಿವಾಸಯ್ಯಂಗಾರ್ಯರು ಈ ಸಂದರ್ಭದಲ್ಲಿ ಸಭೆಯ ಸದಸ್ಯರಿಗೆಲ್ಲ ಸ್ವಾಗತನೀಡಿ, ಆಳುವ ಮಹಾಸ್ವಾಮಿಯವರು ಕೃಪೆಮಾಡಿ ಕಳುಹಿಸಿದ್ದ ಈ ಕೆಳಗೆ ಕೊಟ್ಟಿರುವ ಸಂದೇಶವನ್ನು ಓದಿದರು.

"ನಿಮ್ಮ ವಿಚಾರಣೆಯು ಆರಂಭವಾಗಲಿರುವಾಗ ನಿಮ್ಮ ಕೆಲಸವು ಸುಗಮವಾಗಿ ನೆರವೇರಲೆಂದು ನಾವು ಹಾರೈಸುವೆವು. ನಮ್ಮ ಎಲ್ಲ ಕೋಮಿನ ಪ್ರಜೆಗಳ ಅಭಿವೃದ್ಧಿ,

---

*ಈ ಸಮಿತಿಯಲ್ಲಿ ಕಾರ್ಯದರ್ಶಿಗಳ ವಿನಾ ೨೦ ಮಂದಿ ಸದಸ್ಯರಿದ್ದರು. ಈಚೆಗೆ ಸರಕಾರದವರು ಮತ್ತೆ ಮೂವರು ಸದಸ್ಯರನ್ನು ಸೇರಿಸಿದ್ದಾರೆ.

ಸುಖ ಇವುಗಳನ್ನೇ ನಮ್ಮ ಏಕಮಾತ್ರ ಗುರಿಯಾಗಿಟ್ಟುಕೊಂಡು, ಅಖಂಡಭಾರತ ಅಭಿವೃದ್ಧಿಯಲ್ಲಿ ಮೈಸೂರು ಪ್ರಮುಖಪಾತ್ರ ವಹಿಸಲೆಂಬುದೇ ಯಾವಾಗಲೂ ನಮ್ಮ ಆಶಯವಾಗಿ, ಕಳೆದ ೩೬ ವರ್ಷಗಳಿಂದ ನಮ್ಮ ಸರಕಾರದೊಂದಿಗೆ ನಮ್ಮ ಪ್ರಜೆಗಳು ಹೆಚ್ಚು ಹೆಚ್ಚಾಗಿ ಬೆರೆಯುತ್ತಿರುವುದನ್ನು ಅಪಾರತೃಪ್ತಿಯಿಂದ ನಾವು ನೋಡುತ್ತಿದ್ದೇವೆ.

"ಮುಂದಿನ ಸುಧಾರಣೆಯನ್ನು ರೂಪುಗೊಳಿಸುವುದರಲ್ಲಿ ನೀವು ಇದೇ ಉದ್ದೇಶಗಳನ್ನೇ ನಿಮ್ಮ ಮುಂದಿಟ್ಟುಕೊಳ್ಳುವಿರೆಂದು ನಾವು ನಂಬಿದ್ದೇವೆ ; ಮತ್ತು ಪಾಶ್ಚಾತ್ಯ ಪ್ರಗತಿ ಮಾರ್ಗಗಳನ್ನೊಳಗೊಂಡು, ನಮ್ಮ ಸತ್ಯ ಮತ್ತು ಧರ್ಮಗಳ ಸಂಪ್ರದಾಯಕ್ಕೆ ಚ್ಯುತಿಬಾರದ ವ್ಯವಸ್ಥೆಯೊಂದನ್ನು ರೂಪಿಸುವುದರಲ್ಲಿ ನೀವು ಜಯಶೀಲರಾಗಲೆಂದು ನಾವು ಪ್ರಾರ್ಥಿಸುತ್ತೇವೆ."

ಸರಕಾರಿ ಉದ್ಯೋಗಗಳಲ್ಲಿ ಪ್ರತಿ ಕೋಮಿನವರೂ ಆಯಾಕೋಮಿನ ಜನಸಂಖ್ಯೆಗೆ ತಕ್ಕಂತೆ ಇರಬೇಕೆಂದು ಆಳುವ ಮಹಾಸ್ವಾಮಿಯವರ ಮನೋಗತ. ಯಾವ ಒಂದು ಕೋಮಿನವರಿಗೆ ಹೆಚ್ಚು ಪ್ರಾಶಸ್ತ್ಯ ಕೊಡುವುದಾಗಲಿ, ಇನ್ನೊಂದು ಕೋಮಿನವರು ಹೀನಸ್ಥಿತಿಗೆ ಬರುವುದಾಗಲಿ ಅವರಿಗೆ ಇಷ್ಟವಿಲ್ಲ. ಹಿಂದೆ ಬ್ರಾಹ್ಮಣ, ಬ್ರಾಹ್ಮಣೇತರರಿಗೆ ವೈಷಮ್ಯವುಂಟಾಗಿ, ಪಂಗಡಗಳೇರ್ಪಟ್ಟು, ಭಾರತವರ್ಷದ ಇತರ ಕೆಲವು ಪ್ರಾಂತಗಳಲ್ಲಾದಂತೆಯೇ ಮೈಸೂರು ಸಂಸ್ಥಾನದಲ್ಲಿಯೂ ಪ್ರಜಾಕ್ಷೇಮಕ್ಕೆ ಸ್ವಲ್ಪಮಟ್ಟಿಗೆ ಭಂಗವುಂಟಾಯಿತು. ಆ ಸಮಯದಲ್ಲಿ ೧೯೧೮ನೆಯ ಇಸವಿ ಜೂನ್ ೨೪ನೆಯ ತಾರೀಖಿನ ದಿನ ಪ್ರಜಾಮಿತ್ರಮಂಡಲಿಯವರ ಪರವಾಗಿ ಕೆಲವು ಜನ ದೊಡ್ಡ ಮನುಷ್ಯರು ನಮ್ಮ ಶ್ರೀಮನ್ಮಹಾರಾಜರವರ ಘನಸನ್ನಿಧಾನಕ್ಕೆ ಹೋಗಿ ತಮ್ಮ ಕಷ್ಟಸುಖಗಳನ್ನು ಅರಿಕೆಮಾಡಿಕೊಂಡರು. ಅದಕ್ಕೆ ಅವರು ಅಪ್ಪಣೆಕೊಡಿಸಿದ ಪ್ರತ್ಯುತ್ತರದಲ್ಲಿ, "ರಾಜ್ಯದ ಸರಕಾರಿ ಉದ್ಯೋಗಗಳಲ್ಲಿ ನಮ್ಮ ಪ್ರಜೆಗಳಲ್ಲಿರುವ ಎಲ್ಲಾ ಪಂಗಡದವರೂ ಅವರವರು ನ್ಯಾಯವಾಗಿ ಎಷ್ಟು ಜನವಿರಬೇಕೋ ಅಷ್ಟು ಜನರು ಇರುವಂತೆ ನೋಡಿಕೊಳ್ಳುವುದರಲ್ಲಿ ನಾವು ನಿರಂತರವೂ ಮನಃಪೂರ್ವಕವಾಗಿ ಪ್ರಯತ್ನಪಡುತ್ತಿದ್ದೇವೆ. ಈ ವಿಚಾರದಲ್ಲಿ ನಾವು ನಿಮಗೆ ಹೊಸದಾಗಿ ಭರವಸೆ ಕೊಡಬೇಕಾಗಿಲ್ಲ. ಸ್ವಾಭಾವಿಕವಾದ ಕೆಲವು ಕಾರಣಗಳಿಂದ ಬ್ರಾಹ್ಮಣರು ಪೂರ್ವದಿಂದಲೂ ಸರಕಾರದ ಉದ್ಯೋಗಗಳಲ್ಲಿ ಮುಂದೆ ಬಂದಿರುತ್ತಾರೆ. ನೀವು ಹೇಳುವ ಈ ವಿಧವಾದ ಹೆಚ್ಚುಕಡಿಮೆ, ಕಾಲಕ್ರಮದಲ್ಲಿ ವಿದ್ಯಾಬುದ್ಧಿಗಳು ಹೆಚ್ಚುತ್ತಾ ಬಂದಹಾಗೆಲ್ಲಾ ಮಾಯವಾಗುವುದರಲ್ಲಿ ಸಂದೇಹವಿಲ್ಲ. ಆದರೆ ನಮ್ಮ ಪ್ರಜೆಗಳೆಲ್ಲರ ಏಳಿಗೆಗೂ ಒಂದೇ ಸಮನಾಗಿ ದೊರೆತಿದ್ದ ಅವಕಾಶಗಳಲ್ಲಿ ಒಂದು ಜಾತಿಯವರು ಮಾತ್ರ ಎಲ್ಲರಿಗಿಂತಲೂ ಮೊದಲು ಮುಂದೆ ಬಂದು ವಿದ್ಯಾವಂತರಾದುದು ಅವರ ಅಪರಾಧವಲ್ಲ. ಅದಕ್ಕಾಗಿ ಅವರ ಅಭ್ಯುದಯವನ್ನು ತಡೆದಿಡಬೇಕೆಂಬುದು ಸರ್ವಥಾ ನಮ್ಮ ಇಷ್ಟವಲ್ಲ. ನಮ್ಮ ಪ್ರಜೆಗಳಲ್ಲಿ ಎಲ್ಲರಂತೆಯೇ ಬ್ರಾಹ್ಮಣರೂ ರಾಜಭಕ್ತಿ ಪರಾಯಣರೆಂದು ನಂಬಿದ್ದೇವೆ. ಇಷ್ಟೇ ಅಲ್ಲ, ಪೂರ್ವದಿಂದಲೂ ಬ್ರಾಹ್ಮಣರು ತಮ್ಮ ರಾಜ್ಯಕ್ಕೂ, ರಾಜಮನೆತನಕ್ಕೂ ಅನನ್ಯ ಸಾಧಾರಣವಾದ ಸೇವೆಯನ್ನು ಸಲ್ಲಿಸುತ್ತ ಬಂದಿರುವರು. ಈಗಲೂ ಹಾಗೆಯೇ ಸಲ್ಲಿಸುತ್ತಿರುವರು. ಇದೊಂದನ್ನು ನಾವು ಮರೆಯುವಂತಿಲ್ಲ. ಜಾತಿಜಾತಿಗಳಲ್ಲಿ ಒಬ್ಬರಿಗೆ

ಅಕ್ರಮವಾಗಿ ಪಕ್ಷಪಾತವನ್ನು ತೋರಿಸಿ, ಮತ್ತೊಬ್ಬರನ್ನು ಅಣಗಿಸಬೇಕೆಂಬುದು ನಮ್ಮ ಉದ್ದೇಶವಲ್ಲ. ನಮ್ಮ ರಾಜ್ಯದ ನಿರಂತರ ಕ್ಷೇಮಕ್ಕಾಗಿ ಎಲ್ಲರನ್ನೂ ಒಂದೇ ಸಮನಾಗಿ ಉದ್ಧಾರಮಾಡಿ, ನ್ಯಾಯವಾದ ಧರ್ಮಮಾರ್ಗವನ್ನು ಅವಲಂಬಿಸಬೇಕೆಂಬುದೇ ನಮ್ಮ ಉದ್ದೇಶ. ನಮ್ಮ ರಾಜ್ಯದಲ್ಲಿ ಹಿಂದುಳಿದ ಪಂಗಡದವರಿಗೆ ತಕ್ಕ ಪ್ರೋತ್ಸಾಹವನ್ನು ಕೊಡಲು ನಮ್ಮ ಸರಕಾರದವರು ಸರ್ವಸಾಹಸವನ್ನೂ ಮಾಡುತ್ತಿರುವರು. ಈ ವಿಧವಾದ ರಾಜಧರ್ಮವನ್ನು ಮುಂದೆ ಮತ್ತಷ್ಟು ನಿಶ್ಚಲವಾಗಿ ಪರಿಪಾಲಿಸುತ್ತ ಬರುವೆವೆಂಬ ವಿಷಯನ್ನು ನೀವು ದೃಢವಾಗಿ ನಂಬಬಹುದು.

"ಸ್ಥಳೀಯ ಸ್ವರಾಜ್ಯದ ಮಸೂದೆಯ ವಿಚಾರದಲ್ಲಿ ಸರಕಾರದವರು ತಮಗೆ ಸೂಕ್ತ ತೋರಿದ ಜನರನ್ನು ಆರಿಸುವುದಕ್ಕೆ ಅನುಕೂಲವಾಗುವಂತೆ ಕಾನೂನನ್ನು ಸಿದ್ಧಪಡಿಸಿರುವರು. ಅದರ ಮೇರೆಗೆ ಸಮತ್ವವಿಲ್ಲದಕಡೆ ನೋಡಿ ಆಯಾ ಪಂಗಡದವರನ್ನು ಆರಿಸಿ ನೇಮಿಸುವುದಕ್ಕೆ ಆಸ್ಪದವಾಗುವುದು. ಇದಕ್ಕಿಂತ ಹೆಚ್ಚಾಗಿ ಈಗ ಮಾಡಲಾಗುವುದಿಲ್ಲ. ಈ ನಮ್ಮ ತೀರ್ಮಾನವನ್ನು ನೀವುಗಳು ರಾಜಭಕ್ತಿಯಿಂದ ಶಿರಸಾವಹಿಸಿ ನಡೆದುಕೊಳ್ಳಬೇಕು. ನಮ್ಮ ಸರಕಾರದವರು ನಿಮ್ಮ ಏಳಿಗೆಗಾಗಿ ಸರ್ವಪ್ರಯತ್ನವನ್ನೂ ಮಾಡುವರು ; ಆದರೆ ನೀವು ಮಾತ್ರ ನಮ್ಮ ಉದ್ದೇಶ ಸಾಧನೆಯಲ್ಲಿ ನಮ್ಮ ಪ್ರಜಾಸಮುದಾಯಕ್ಕೆ ಸೇರಿದ ನಾನಾಜಾತಿಗಳವರಲ್ಲಿ ಇದುವರೆಗೂ ಬೇರೂರಿಬಂದಿರುವ ಅನ್ಯೋನ್ಯ ಸೌಹಾರ್ದಕ್ಕೂ, ಐಕ್ಯಮತ್ಯಕ್ಕೂ, ಭಂಗವುಂಟುಮಾಡದಂತೆ ಎಚ್ಚರಿಕೆಯಿಂದಿರಬೇಕು. ಇದೇ ನಮ್ಮ ಇಷ್ಟ. ಇದೇ ನಿಜವಾದ ಅಭ್ಯುದಯಕ್ಕೆ ಮುಖ್ಯವಾಗಿರಬೇಕಾದ ಅಂಗ. ಈ ಕಡೆ ಬ್ರಾಹ್ಮಣರೂ ಕೂಡ ಇತರ ಜಾತಿಯವರಲ್ಲಿ ಸ್ಥೈರಣೆಯನ್ನೂ, ಸಮಾಧಾನ ಬುದ್ಧಿಯನ್ನೂ ತೋರಿಸಿ, ಸ್ವಾಭಾವಿಕವಾದ ಅವರ ಆಶೋತ್ತರಗಳಲ್ಲಿ ತಮ್ಮ ಸಹೃದಯಭಾವವನ್ನು ವಸ್ತುತಃ ತೋರ್ಪಡಿಸುವರೆಂದು ನಂಬಿದ್ದೇವೆ." ಎಂಬುದಾಗಿ ಹೇಳಿರುವರು.

ಮೈಸೂರು ಸರಕಾರದವರು ಸಾರ್ವಭೌಮ ಸರಕಾರದವರಿಗೆ ವರ್ಷಂಪ್ರತಿ ಮೂವತ್ತೈದು ಲಕ್ಷ ರೂಪಾಯಿಗಳನ್ನು ಪೊಗದಿ ಕೊಡುತ್ತಿದ್ದರು. ಇದರಲ್ಲಿ ಹತ್ತೂವರೆ ಲಕ್ಷ ರೂಪಾಯಿಗಳನ್ನು ಕಡಿಮೆಮಾಡಿರುವುದಾಗಿ ಇಂಡಿಯದ ವೈಸರಾಯರಾಗಿದ್ದ ಲಾರ್ಡ್ ಅರ್ವಿನ್ ಅವರು ೧೯೨೭ರಲ್ಲಿ ರಜತಮಹೋತ್ಸವಕ್ಕೆ ಮೊದಲು ಮೈಸೂರಿಗೆ ಬಂದಿದ್ದಾಗ್ಗೆ ತಿಳಿಸಿದರು. ಈ ಉಳಿದ ಪೊಗದಿಯನ್ನು ಸಂಪೂರ್ಣವಾಗಿ ತೊಡೆದು ಹಾಕಬೇಕೆಂದೂ, ಬೆಂಗಳೂರು ದಂಡಿನ ಕೆಲವು ಭಾಗಗಳನ್ನು ಮೈಸೂರು ಸರಕಾರದವರಿಗೆ ಬಿಟ್ಟುಕೊಡಬೇಕೆಂದೂ, ಸಂಸ್ಥಾನದ ಸಚಿವರಾದ ಶ್ರೀಯುತ ಅಮೀನ್, ಉಲ್- ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಸಾರ್ವಭೌಮ ಸರಕಾರದವರೊಂದಿಗೆ ಕಾಗದಪತ್ರಗಳನ್ನು ನಡೆಸುತ್ತಿರುವರು. ಇವೂ ಕಾಲಕ್ರಮದಲ್ಲಿ ಫಲಕಾರಿಗಳಾಗುವುದೆಂಬ ಪೂರ್ಣಭರವಸೆ ಇದೆ.

# ೭. ಮೈಸೂರಿನಲ್ಲಿ ದಸರಾ ಮಹೋತ್ಸವ

ಮೈಸೂರಿನಲ್ಲಿ ದಸರಾ ಮಹೋತ್ಸವವೆಂದರೆ ಅದೊಂದು ದೊಡ್ಡ ಸಂಭ್ರಮ. ಈ ಉತ್ಸವವನ್ನು ನೋಡಿ ಆನಂದಿಸುವುದಕ್ಕೆ ಭರತಖಂಡದ ಅನೇಕಕಡೆಗಳಿಂದ ಹತ್ತಾರುಸಾವಿರ ಜನರು ಆ ಕಾಲದಲ್ಲಿ ಬಂದು ಸೇರುತ್ತಾರೆ. ಮೈಸೂರಿನಲ್ಲಿ ನಡೆಯುವ ದಸರಾ ಮಹೋತ್ಸವವನ್ನು ಮುನ್ನೂರು ವರ್ಷಗಳ ಹಿಂದೆ ರಾಜ ಒಡೆಯರವರು ಕಾಳಿಕಾಪುರಾಣದಲ್ಲಿ ಹೇಳಿರುವ ವಿಧಿಗನುಸಾರವಾಗಿ ಏರ್ಪಡಿಸಿದರು.

ಈ ಉತ್ಸವವು ಪ್ರತಿವರ್ಷದಲ್ಲಿಯೂ ಆಶ್ವಯುಜ ಶುದ್ಧ ಪಾಡ್ಯಮಿಯ ದಿನ ಪ್ರಾರಂಭವಾಗಿ ಅವಿಚ್ಛಿನ್ನವಾಗಿ ಹತ್ತುದಿನಗಳು ಅತಿಸಂಭ್ರಮದಿಂದ ನಡೆಯುತ್ತದೆ. ಪಾಡ್ಯಮಿಯದಿನ ಪ್ರಾತಃಕಾಲ ಶ್ರೀಮನ್ಮಹಾರಾಜರವರು ಮಂಗಳಸ್ನಾನವನ್ನು ಮಾಡಿ, ದೀಕ್ಷಾವಸ್ತ್ರಗಳನ್ನು ಧರಿಸಿ, ಶ್ರೀ ಸಿದ್ಧಿವಿನಾಯಕನ ಪೂಜೆಯನ್ನೂ ತಮ್ಮ ಮನೆದೇವರಾದ ಶ್ರೀ ಚಾಮುಂಡೇಶ್ವರೀ ಅಮ್ಮನವರ ಪೂಜೆಯನ್ನೂ ಮಾಡಿ, ಕಂಕಣಧಾರಣ ಮಾಡಿಕೊಳ್ಳುವರು. ತರುವಾಯ ಆಳುವ ಮಹಾಸ್ವಾಮಿಯವರೂ, ಯುವರಾಜರೂ, ಅವರ ಮಕ್ಕಳಾದ ಶ್ರೀಜಯಚಾಮರಾಜ ಒಡೆಯರವರೂ, ಮಂಗಳವಾದ್ಯಘೋಷಗಳಾಗುತ್ತಿರುವಲ್ಲಿ ದರಬಾರು ಮಂದಿರಕ್ಕೆ ಪ್ರವೇಶಿಸುವರು. ಅಲ್ಲಿ ಈ ಮಹೋತ್ಸವಕ್ಕೆ ಆಹ್ವಾನಿಸಲ್ಪಟ್ಟ ದಿವಾನರವರೇ ಮೊದಲಾದ ಶ್ರೇಷ್ಠ ಅಧಿಕಾರವರ್ಗದವರು, ಪ್ರಜಾಪ್ರಮುಖರು, ರಾಜಮನೆತನದವರು, ಅರಮನೆಯ ಅಧಿಕಾರಿಗಳು, ರಾಜಪುರೋಹಿತರು, ಇತರ ವೈದಿಕ ವಿದ್ವನ್ಮಂಡಲಿಯವರು ನೆರೆದಿರುವರು. ಶ್ರೀಮನ್ಮಹಾರಾಜರವರು ಸುವರ್ಣಪೀಠದಮೇಲೆ ಕುಳಿತು, ಶಾಸ್ತ್ರೋಕ್ತವಾಗಿ ಕಲಶಪೂಜೆಯನ್ನೂ ನವಗ್ರಹಪೂಜೆಯನ್ನೂ ಮಾಡುವರು.

ಶ್ರೀಮನ್ಮಹಾರಾಜರವರು ದರಬಾರಿಗೆ ಬರುವಾಗ ರಾಜಮನೆತನದವರೊಬ್ಬರು ಪಟ್ಟದಕತ್ತಿಯನ್ನು ಹಿರಿದು ಇವರೊಂದಿಗೆ ಬರುವರು. ಪೂಜೆ ಮುಗಿದನಂತರ ಇವರ ಅಂಗರಕ್ಷಕರಾದ ಸರದಾರರ ಕೈಯಮೇಲೆ ಕೈಯನ್ನಿಟ್ಟು ಶ್ರೀಮನ್ಮಹಾರಾಜರವರು ಸಿಂಹಾಸನದಬಳಿಗೆ ಬಂದು, ಕಾಳಿಕಾ ಪುರಾಣೋಕ್ತಪ್ರಕಾರವಾಗಿ ಅದನ್ನು ಪೂಜಿಸಿದ ಬಳಿಕ ಅದಕ್ಕಿರುವ ಏಳು ಮೆಟ್ಟಲುಗಳನ್ನೂ ಹತ್ತಿ ಸಿಂಹಾಸನದ* ಮೇಲೆ ಕೂಡುತ್ತಾರೆ. ಆಗ ಇಪ್ಪತ್ತೊಂದು ಕುಶಾಲು ತೋಪುಗಳು ಹಾರುವುವು.

ಶ್ರೀಮನ್ಮಹಾರಾಜರವರು ಸಿಂಹಾಸನವನ್ನು ಏರಿದಕೂಡಲೆ ಮುಖ್ಯ ಮಠಗಳಿಂದಲೂ ದೇವಾಲಯಗಳಿಂದಲೂ ಬಂದಿರತಕ್ಕ ಮರ್ಯಾದೆಗಳನ್ನು ಸ್ವೀಕರಿಸುವರು. ತರುವಾಯ ಅಲ್ಲಿ ನೆರೆದಿರುವ ವೈದಿಕಮಂಡಲಿಯವರು ವೇದಮಂತ್ರಗಳನ್ನು ಹೇಳಿ, ಶ್ರೀಮನ್ಮಹಾರಾಜರವರಿಗೆ ತೀರ್ಥವನ್ನು ಪ್ರೋಕ್ಷಿಸಿ ಆಶೀರ್ವದಿಸುವರು. ಇದಾದತರುವಾಯ

---

*ಈ ಸಿಂಹಾಸನವನ್ನೂ ಶ್ರೀರಂಗಪಟ್ಟಣವನ್ನೂ ಶ್ರೀರಂಗರಾಯನು ರಾಜ ಒಡೆಯರಿಗೆ ಕೊಟ್ಟನು. ರಾಜ ಒಡೆಯರವರು ೧೬೧೦ರಲ್ಲಿ ಶ್ರೀರಂಗಪಟ್ಟಣದಲ್ಲಿ ಸಿಂಹಾಸನಾರೋಹಣಮಾಡಿ ಪಟ್ಟಾಭಿಷಕ್ತರಾದರು. ಅದು ಮೊದಲು ದಸರಾ ಮಹೋತ್ಸವವು ಅತಿ ವೈಭವದಿಂದ ನಡೆದು ಬಂದಿದೆ.

ಪಟ್ಟದಕತ್ತಿಯನ್ನು ಸಿಂಹಾಸನದ ಮೇಲೆ ಮಹಾರಾಜರವರ ಬಲಭಾಗದಲ್ಲಿಟ್ಟು, ರಾಜಪುರೋಹಿತರು, ಇತರ ವೈದಿಕರೂ, ಆಳುವ ಮಹಾಸ್ವಾಮಿಯವರಿಗೆ ಆರ್ಶೀವಾದ ಫಲಮಂತ್ರಾಕ್ಷತೆಗಳನ್ನು ಸಮರ್ಪಿಸುವರು. ಅನಂತರ ಅರಮನೆಯ ಸರದಾರರೂ, ರಾಜಕುಮಾರರೂ, ದಿವಾನರೂ ಮತ್ತು ಇತರ ಅಧಿಕಾರ ವರ್ಗದವರೂ, ಪೂರ್ವಪದ್ಧತಿಯ ಕ್ರಮವನ್ನನುಸರಿಸಿ, ಶ್ರೀಮನ್ಮಹಾರಾಜರವರಿಗೆ ನಜರುಮುಜುರೆಗಳನ್ನು ಒಪ್ಪಿಸುವರು. ಈ ಕಾಲದಲ್ಲಿಯೇ ಅರಮನೆಯ ಪಟ್ಟದಾನೆ, ಪಟ್ಟದಕುದುರೆ ಮೊದಲಾದುವುಗಳನ್ನು ಸಮಸ್ತ ರಾಜ ವೈಭವಗಳೊದಿಗೆ ಕೆರೆಯ ಬಳಿಗೆ ಕರೆದುಕೊಂಡು ಹೋಗುತ್ತಾರೆ. ನೆರೆದಿರುವ ಸಭಿಕರೆಲ್ಲರೂ ಶ್ರೀಮನ್ಮಹಾರಾಜರವರಿಗೆ ನಜರುಮುಜುರೆಗಳನ್ನು ಮಾಡಿ, ತಮ್ಮತಮ್ಮ ಸ್ಥಳಗಳಲ್ಲಿ ಕುಳಿತು, ಸೈನಿಕರು ಶ್ರೀಮನ್ಮಹಾರಾಜರವರಿಗೆ ನಡೆಸುವ ಮರ್ಯಾದೆಗಳನ್ನು ನೋಡುತ್ತಾರೆ. ಪಟ್ಟದಾನೆ ಮತ್ತು ಕುದುರೆಯ ಮೆರವಣಿಗೆ ಹಿಂದಿರುಗಿ ಬಂದಕೂಡಲೆ, ಪಟ್ಟದಾನೆ ತನ್ನ ಸೊಂಡಿಲನ್ನು ಮೇಲಕ್ಕೆತ್ತಿ, ಅದರಲ್ಲಿ ತುಂಬಿಕೊಂಡಿರುವ ಬಣ್ಣಬಣ್ಣದ ಪುಷ್ಪಗಳನ್ನು ಎರಚುತ್ತದೆ. ಪಟ್ಟದಕುದುರೆ ಮೊಣಕಾಲೂರಿ ರಾಜಮರ್ಯಾದೆಯನ್ನು ಮಾಡುವುದು. ಆ ಸಮಯದಲ್ಲಿ ದರಬಾರಿನಲ್ಲಿರುವವರೆಲ್ಲರೂ ಎದ್ದು ನಿಲ್ಲುವರು. ದರಬಾರಿಗೆ ಬಂದವರಿಗೆಲ್ಲ ಪುಷ್ಪಹಾರ, ತಾಂಬೂಲಗಳನ್ನು ಕೊಟ್ಟ ತರುವಾಯ ಪುನಃ ಎಲ್ಲರೂ ಶ್ರೀಮನ್ಮಹಾರಾಜರವರಿಗೆ ಮುಜುರೆಯನ್ನುಮಾಡಿ, ಮಹಾಸ್ವಾಮಿಯವರು ಪರಿವಾರದೊಂದಿಗೆ ಅಲ್ಲಿಂದ ಹೊರಟನಂತರ, ಅರಮನೆಯಿಂದ ಹೊರಡುವರು. ದರಬಾರು ವಿಧಿಗಳೆಲ್ಲಾ ಮುಗಿಯುವುದಕ್ಕೆ ಸುಮಾರು ಎರಡು ಘಂಟೆಗಳಕಾಲ ಹಿಡಿಯುತ್ತದೆ.

ದಸರಾದಲ್ಲಿ ಪ್ರತಿದಿನವೂ ಸಾಯಂಕಾಲ ನೋಟಕರ ಸಂಭ್ರಮಕ್ಕಾಗಿ ಅರಮನೆಯ ಮುಂದೆ ಕತ್ತಿಯವರಸೆಗಳು, ಜಟ್ಟಿಕಾಳಗವೇ ಮೊದಲಾದ ವಿನೋದಗಳನ್ನು ಏರ್ಪಡಿಸುವುದಲ್ಲದೆ, ಅರಮನೆಯನ್ನೂ, ಮೈಸೂರು ನಗರವನ್ನು ಸಹಸ್ರಾರು ವಿದ್ಯುಚ್ಛಕ್ತಿ ದೀಪಮಾಲೆಗಳಿಂದ ಅಲಂಕರಿಸುವರು. ಏಳನೆಯದಿನ ಮೂಲನಕ್ಷತ್ರದಲ್ಲಿ ಸರಸ್ವತಿಯನ್ನೂ, ಮಹಾನವಮಿಯದಿನ ಪಟ್ಟದಾನೆ, ಪಟ್ಟದಕುದುರೆ, ಕತ್ತಿ ಮೊದಲಾದುವನ್ನೂ ಶ್ರೀಮನ್ಮಹಾರಾಜರವರು ಪೂಜೆಮಾಡುತ್ತಾರೆ. ವಿಜಯದಶಮಿಯದಿನ ಸಂಜೆಯಲ್ಲಿ ಶ್ರೀಮನ್ಮಹಾರಾಜರವರು ಆನೆಯ ಅಂಬಾರಿಯ ಮೇಲೆ, ಬನ್ನಿ ಮುಡಿಯಲು ಅರಮನೆ ಯಿಂದ ಹೊರಟು, ಬನ್ನಿಪೂಜೆ ಮೊದಲಾದುವನ್ನು ನೆರವೇರಿಸಿಕೊಂಡು, ರಾಜವೈಭವದ ಮೆರವಣಿಗೆಯಲ್ಲಿ ರಾತ್ರಿ ಸುಮಾರು ಹತ್ತುಘಂಟೆಗೆ ಅರಮನೆಗೆ ಹಿಂದಿರುಗುವರು. ಪ್ರತಿವರ್ಷವೂ ಇಂಡಿಯ ದೇಶದ ನಾನಾಭಾಗಗಳಿಂದ ಸಾವಿರಾರು ಮಂದಿ ಬಂದು, ಈ ಸಂಭ್ರಮವನ್ನು ನೋಡಿ ಆನಂದಪಡುವರು. ದಸರಾಮಹೋತ್ಸವವು ಇಷ್ಟು ವೈಭವದಿಂದ ಭಾರತವರ್ಷದ ಮತ್ತೆ ಯಾವ ಭಾಗದಲ್ಲಿಯೂ ನಡೆಯುವುದಿಲ್ಲ.

ಆಳುವ ಮಹಾಸ್ವಾಮಿಯವರ ವರ್ಧಂತಿ ಮಹೋತ್ಸವ ಕಾಲದಲ್ಲಿಯೂ ಇದೇ ರೀತಿಯಲ್ಲಿ ಅರಮನೆಯೂ ಮೈಸೂರು ನಗರವೂ ವಿದ್ಯುಚ್ಛಕ್ತಿ ದೀಪಮಾಲೆಗಳಿಂದ ಬೆಳಗುವುದಲ್ಲದೆ, ಪ್ರಭುಗಳ ಮೆರವಣಿಗೆಯೂ ಅತಿ ವೈಭವದಿಂದ ನಡೆಯುತ್ತದೆ.



## ೮. ಶ್ರೀಮನ್ಮಹಾರಾಜರವರ ರಜತ ಮಹೋತ್ಸವ

ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರು ಪ್ರಾಪ್ತವಯಸ್ಕರಾಗುತ್ತಲೇ ೧೯೦೨ನೆಯ ಆಗಸ್ಟ್ ೮ನೆಯ ತಾರೀಖಿನ ದಿನ ಆಗ ವೈಸರಾಯರಾಗಿದ್ದ ಲಾರ್ಡ್ ಕರ್ಜನ್ ಅವರು, ಪ್ರಭುಗಳಿಗೆ ರಾಜ್ಯದ ವಿಶಿಷ್ಟ ಅಧಿಕಾರವನ್ನೂ ವಹಿಸಿಕೊಟ್ಟು, ರಾಜ್ಯ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದರಷ್ಟೆ. ಅದುಮೊದಲು ಇಪ್ಪತ್ತೈದುವರ್ಷಗಳಕಾಲ ಮೈಸೂರು ಸಂಸ್ಥಾನವು ಸರ್ವತೋಮುಖವಾದ ಅಭಿವೃದ್ಧಿಯನ್ನು ಏಕರೀತಿಯಾಗಿ ಪಡೆದು, ಆಳುವ ಮಹಾಸ್ವಾಮಿಯವರ ರಾಜ್ಯಭಾರವು ರಾಮರಾಜ್ಯದಂತೆ ಸುಸೂತ್ರವಾಗಿಯೂ ಸರ್ವಜನ ಸಮ್ಮತವಾಗಿಯೂ ನಡೆದುಕೊಂಡು ಬಂದಿತು. ಇದರಿಂದ ಸಂಸ್ಥಾನದ ಪ್ರಜೆಗಳು ತಮಗುಂಟಾದ ಆನಂದವನ್ನು ಪ್ರಕಾಶಪಡಿಸುವುದಕ್ಕಾಗಿ ಇವರ ಧರ್ಮಪ್ರಭುತ್ವದ **'ರಜತ ಮಹೋತ್ಸವ'** (ಸಿಲ್ವರ್ ಜ್ಯೂಬಿಲಿ) ವನ್ನು ೧೯೨೭ನೆಯ ಆಗಸ್ಟ್ ೮ನೆಯ ತಾರೀಖಿನ ದಿನ ಸಂಸ್ಥಾನದಲ್ಲೆಲ್ಲಾ ವಿಶೇಷವೈಭವದಿಂದ ನಡೆಯಿಸಿದರು.

ಈ ಸುಸಮಯದಲ್ಲಿ ಪ್ರಜೆಗಳೆಲ್ಲಾ ಒಟ್ಟುಗೂಡಿ ಆಳುವ ಮಹಾಸ್ವಾಮಿಯವರಿಗೆ ಒಪ್ಪಿಸಿದ ಅಭಿನಂದನ ಪತ್ರಿಕೆಯನ್ನು ಇಲ್ಲಿ ಕೊಟ್ಟಿದೆ.

॥ ಶ್ರೀರಸ್ತು॥

ಸ್ವಸ್ತಿ॥ ಶ್ರೀಮನ್ಮಹೀಮಂಡಲ ಮಂಡನಾಯಮಾನವೆನಿಸಿರುವ ಭರತಖಂಡದಲ್ಲಿ ಅತಿ ಪ್ರಖ್ಯಾತಿ ಪಡೆದ ಕರ್ಣಾಟಕ ಜನಪದಕ್ಕೆ ಆಶ್ರಯಸ್ಥಾನವಾಗಿರುವ ಶ್ರೀಮನ್ಮಹೀಶೂರ ಸಂಸ್ಥಾನದ ಮಹಾಪ್ರಭುಗಳವರಾದ ರಾಜಾಧಿರಾಜ ರಾಜ ಪರಮೇಶ್ವರ ಪ್ರೌಢ ಪ್ರತಾಪಾ ಪ್ರತಿಮವೀರಾದ್ಯನೇಕ ಬಿರುದಾಲಂಕೃತರಾದ ಮಹಾರಾಜ ಶ್ರೀಮಚ್ಚಾಮರಾಜೇಂದ್ರ ತನುಸಂಜಾತರಾದ **ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್** ಮಹಾಸ್ವಾಮಿಯವರ ದಿವ್ಯಸನ್ನಿಧಾನದಲ್ಲಿ

ಶ್ರೀ ಶಾಲಿವಾಹನ ಶಕ ೧೮೪೯ನೆಯ ಪ್ರಭವ ಸಂವತ್ಸರದ ಶ್ರಾವಣ ಶುದ್ಧ ೧೦ ಸೋಮವಾರದಂದು, ಮಹಾಸ್ವಾಮಿಯವರ ಧರ್ಮಪ್ರಭುತ್ವದ **ರಜತ ಮಹೋತ್ಸವ** ಶುಭ ಸಮಯದಲ್ಲಿ, ಮಹಾಸ್ವಾಮಿಯವರ ಕೃಪಾಪರಿಪೋಷಣೆಯಿಂದ ಆನಂದಿಸುತ್ತಿರುವ ನಾನಾ ಜಾತಿ ಮತಗಳ ಪ್ರಜಾಮಂಡಲಿಯೆಲ್ಲವೂ ಸೇರಿ ನೈಜವಾದ ರಾಜಭಕ್ತಿ ವಿನಯ ವಿಶ್ವಾಸ ಕೃತಜ್ಞತೆಗಳಿಂದ ಸಮರ್ಪಿಸುವ ಅಭಿನಂದನ ಪತ್ರಿಕೆಯ ವಿವರವೆಂತೆಂದರೆ:-

ಮಹಾಸ್ವಾಮಿಯವರು ಕುಲಪರಂಪರಾಗತವಾದ ದಿವ್ಯ ಸಿಂಹಾಸನವನ್ನಾರೋಹಿಸಿ ಗುರುತರವಾದ ರಾಜ್ಯಭಾರವನ್ನು ಕೈಕೊಂಡು ಇಂದಿಗೆ ಇಪ್ಪತ್ತೈದು ಸಂವತ್ಸರಗಳಾದುವು. ಈ ಕಾಲವಿಸ್ತರದಲ್ಲಿ ಪ್ರಭುಗಳವರ ಆಳಿಕೆಯು ಸುಸೂತ್ರವಾಗಿಯೂ ಶುಭಪರಿಪೂರ್ಣ ವಾಗಿಯೂ ಲೋಕರಂಜಕವಾಗಿಯೂ ನಡೆದುಕೊಂಡು ಬಂದಿರುವುದೆಂಬ ಮಹಾಸಂತೋಷವನ್ನು ಪ್ರಜೆಗಳಾದ ನಾವು ಈ ಸಂದರ್ಭದಲ್ಲಿ ಬಿನ್ನಯಿಸಲು ಉತ್ಸಾಹವುಳ್ಳವರಾಗಿದ್ದೇವೆ.

ಮಹಾಸ್ವಾಮಿಯವರು ಪ್ರಜಾಭ್ಯುದಯಕ್ಕಾಗಿ ಮಾಡಿಸಿರುವ ವಿವಿಧ ಕಾರ್ಯಕಲಾಪಗಳು ದೇಶಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಉಲ್ಲೇಖಿಸಿಕೊಳ್ಳತಕ್ಕುವುಗಳಾಗಿದೆ. ಮಹಾಪ್ರಭುಗಳವರ ಚಾರಿತ್ರವು ಭೂಪಾಲಕ ಕುಲಕ್ಕೆ ಆದರ್ಶಪ್ರಾಯವಾಗಿರುವುದೆಂದು ದೇಶ ವಿದೇಶಗಳಲ್ಲಿ ಸುಪ್ರಸಿದ್ಧವಾಗಿದೆ. ಇಂತಹ ಪ್ರಭುಗಳನ್ನು ಪಡೆದಿರುವುದು ಪ್ರಜೆಗಳ ಭಾಗ್ಯ ವಿಶೇಷವೆಂಬುದು ಸರ್ವಜನ ಸಮಾದೃತವಾಗಿದೆ.

ಮಹಾಸ್ವಾಮಿಯವರ ಆಳ್ವಿಕೆಯ ವಿಚಕ್ಷಣತೆಯನ್ನು ರಾಜನೀತಿಜ್ಞರು ಕೊಂಡಾಡುತ್ತಿರುವರು. ಮಹಾಸ್ವಾಮಿಯವರ ರಾಜ್ಯಯಂತ್ರದ ಅಂಗಾಂಗಗಳು ಪ್ರಕೃತ ಕಾಲಕ್ಕೆ ತಕ್ಕಂತೆ ವಿಸ್ತಾರಗೊಂಡು ಪರಿಷ್ಕಾರ ಹೊಂದುತ್ತ, ಶಾಸನ ವಿಧಾನ ಭಾಗದಲ್ಲಿಯೂ ಕಾರ್ಯಸಾಧನ ಭಾಗದಲ್ಲಿಯೂ ನ್ಯಾಯ ನಿರ್ಣಯ ಭಾಗದಲ್ಲಿಯೂ ಲೋಕ ಸಮ್ಮತವಾಗುತ್ತ ಬಂದಿವೆ. ಈ ರಾಜ್ಯ ಪರಿಪಾಲನ ಕೌಶಲದಿಂದ ರಾಷ್ಟ್ರದ ಆದಾಯವು ಮುಮ್ಮಡಿಯಾಗಿ ಬೆಳೆದು ಹೆಚ್ಚುತ್ತಲೂ ಪ್ರಜಾ ಸೌಕರ್ಯಗಳು ಅದನ್ನನುಸರಿಸಿ ಬಹುಮುಖವಾಗಿ ಪ್ರವರ್ಧಿಸುತ್ತಲೂ ಇವೆ.

ಮಹಾಸ್ವಾಮಿಯವರ ಪ್ರಜಾವಾತ್ಸಲ್ಯ ಪ್ರಭಾವದಿಂದ ನಾನಾ ವರ್ಗಗಳ ಜನರಲ್ಲಿಯೂ ವಿದ್ಯಾಭ್ಯಾಸವು ಪ್ರಚುರವಾಗುತ್ತ ಜ್ಞಾನಾಭಿಲಾಷೆಯು ಬೆಳೆಯುತ್ತಿದೆ; ಗೀರ್ವಾಣ ಕರ್ಣಾಟಕ ಭಾಷೆಗಳು ಪುನರುಜ್ಜೀವನವನ್ನು ಪಡೆಯುತ್ತಿವೆ; ಪಾಶ್ಚಾತ್ಯ ವಿಜ್ಞಾನವು ಪ್ರಸರಿಸುತ್ತಿದೆ; ಶಿಲ್ಪ ಸಂಗೀತಾದಿ ಲಲಿತ ಕಲೆಗಳು ಅಭಿವರ್ಧಿಸುತ್ತಿವೆ. ಸಾವಿರಾರು ಪಾಠಶಾಲೆಗಳೂ ಪ್ರೌಢ ಕಲಾನಿಲಯಗಳೂ ವಿಶ್ವವಿದ್ಯಾಪೀಠವೂ ಮಹಾಸ್ವಾಮಿಯವರ ವಿದ್ಯಾಭಿಮಾನಕ್ಕೆ ಶಾಶ್ವತ ನಿದರ್ಶನಗಳಾಗಿ ರಾಜ್ಯದ ಪುರೋಭಿವೃದ್ಧಿಗೆ ಪರಮ ಸಾಧಕಗಳಾಗಿ ಶೋಭಿಸುತ್ತಿವೆ.

ಮಹಾಸ್ವಾಮಿಯವರು ನಿರ್ಮಾಣಮಾಡಿಸಿರುವ ಕೃಷ್ಣರಾಜಸಾಗರ ಮೊದಲಾದ ವಿಶಾಲ ಸರೋವರಗಳೂ ಬಾವಿ ಕೆರೆ ಕಾಲುವೆಗಳೂ ಸುಗಮಗಳಾದ ಮಾರ್ಗಗಳೂ ಧೂಮಶಕಟ ಸರಣಿಗಳೂ ವಿದ್ಯುಚ್ಛಕ್ತಿ ಸಂಧಾನಗಳೂ ಖನಿಜ ಶೋಧನೋದ್ಯಮಗಳೂ ರಾಸಾಯನಿಕ ರಚನೆಗಳೂ ಇತರ ವೈಜ್ಞಾನಿಕ ಕೃತಿಗಳೂ ಭೂವ್ಯವಸಾಯವಿಸ್ತರಣ ಯಂತ್ರ ಕರ್ಮಪ್ರಸರಣ ವಾಣಿಜ್ಯೋತ್ತೇಜನಗಳಿಗೆ ಅನುಕೂಲಗಳಾಗಿ ಜನರಲ್ಲಿ ಕಾರ್ಯೋತ್ಸಾಹವನ್ನು ತುಂಬಿ, ಬುದ್ಧಿಕುಶಲತೆಯನ್ನು ಉತ್ತಮಗೊಳಿಸಿ, ಅವರ ಜೀವನ ಯೋಗ್ಯತೆಯನ್ನು ಉನ್ನತಿಗೆ ತರುತ್ತಿವೆ.

ಮಹಾಸ್ವಾಮಿಯವರು ಸ್ಥಾಪನೆಮಾಡಿಸಿಕೊಟ್ಟಿರುವ ನೂತನ ಯಂತ್ರೋಪಕರಣ ಸಜ್ಜಿತಗಳಾದ ವೈದ್ಯಶಾಲೆಗಳು, ಪಶು ಚಿಕಿತ್ಸಾಲಯಗಳು, ಪುರಾಲಂಕಾರಗಳಾದ ಸೌಧಮಂಟಪೋದ್ಯಾನಗಳು, ಪುಸ್ತಕ ಭಾಂಡಾಗಾರ ವಾಚನಮಂದಿರಗಳು, ದ್ರವ್ಯಾಗಾರ ಸಹಕಾರ ಸಂಘಗಳು-ಇವೇ ಮೊದಲಾದ ಸಂಸ್ಥೆಗಳು ವರ್ಷೇ ವರ್ಷೇ ಅಭಿವೃದ್ಧಿ ಪಡೆದು ಜನಜೀವನೋತ್ಕರ್ಷವನ್ನು ಸೂಚಿಸುತ್ತ ಮಹಾಪ್ರಭುಗಳವರ ಪ್ರಜೋತ್ತೇಜಕ ಶಕ್ತಿಯನ್ನು ಪ್ರಕಟಿಸುತ್ತಿರುವುವು.

ಮಹಾಸ್ವಾಮಿಯವರು ಬೆಳೆಯಿಸಿ ಬಲಪಡಿಸಿರುವ ಪ್ರಜಾಪ್ರತಿನಿಧಿ ಸಭೆ ಶಾಸನಸಭೆಗಳೂ ಸಂಪದಭಿವರ್ಧಕ ಸಮಿತಿ ಮಂಡಲಸಮಿತಿಗಳೂ ನಗರ ಸಭೆ ಗ್ರಾಮ ಪಂಚಾಯತಿಗಳೂ ರಾಷ್ಟ್ರದಲ್ಲಿ ಪ್ರಜಾಧರ್ಮ ಪ್ರಕಾಶಕ್ಕೆ ಸಾಧನಗಳಾಗಿವೆ. ಈ ಸಂಸ್ಥೆಗಳ ಮೂಲಕ ಜನರು ರಾಜ್ಯವಿಚಾರಗಳಲ್ಲಾಸಕ್ತರಾಗಿ, ಜನಪದನಿಷ್ಠೆಯನ್ನಭ್ಯಸಿಸಿ, ದೇಶಕಾರ್ಯನಿರ್ವಾಹದಲ್ಲಿ ಭಾಗಿಗಳಾಗಲು ಅವಕಾಶವುಂಟಾಗಿರುವುದು. ಅವುಗಳ ಮಹಿಮೆಯಿಂದ ಪ್ರಜೆಗಳಲ್ಲಿ ರಾಜಕೀಯನ್ಯಾಯ ಪರಿಜ್ಞಾನವೂ ಸ್ವಕರ್ತವ್ಯ ವಿವೇಕವೂ ಸ್ವಪ್ರಯತ್ನ ಬುದ್ಧಿಯೂ ಜನೈಕ್ಯಭಾವವೂ ದೇಶಹಿತೈಕ ದೃಷ್ಟಿಯೂ ಪ್ರಬಲಿಸುವುವಲ್ಲದೆ ರಾಜ್ಯಯಂತ್ರವು ನಿರಾತಂಕವಾಗಿಯೂ ಪ್ರಜಾನುರಂಜಕವಾಗಿಯೂ ನಡೆಯುವಂತಾಗಿ, ಆ ಮೂಲಕ ಮಹಾಪ್ರಭುಗಳ ಯಶಸ್ಸೂ ರಾಜ್ಯದ ಶ್ರೇಯಸ್ಸೂ ಮತ್ತಷ್ಟು ಅಭಿವರ್ಧಿಸುವುವೆಂದು ನಾವು ದೃಢವಾಗಿ ನಂಬಿಕೊಂಡಿರುವೆವು.

ಮೇಲಾಗಿ, ಮಹಾಸ್ವಾಮಿಯವರ ದೈವಭಕ್ತಿ, ಭೂತದಯೆ, ಗಾಂಭೀರ್ಯ, ಸದಾಚಾರವರ್ತನೆ, ಪೂರ್ವ ಸಂಪ್ರದಾಯ ವಿಶ್ವಾಸ, ಆತ್ಮ ಪರಿಶುದ್ಧತೆ, ಗುರುಜನ ನಮ್ರತೆ, ವಿದ್ವಜ್ಜನ ಮಮತೆ, ಸರ್ವಜನ ಸುಲಭತೆ, ರಾಜಧರ್ಮ ಪರಾಯಣತೆ, ಮಂತ್ರಾಲೋಚನ ಚತುರತೆ, ಲೋಕಾರಾಧನ ತತ್ಪರತೆ– ಈ ಸದ್ಗುಣಗಳು ಸಕಲ ದೇಶ ಸಂಸ್ತುತಗಳಾಗಿ, ಮಹಾಸ್ವಾಮಿಯವರನ್ನು ಜನಕ ಯುಧಿಷ್ಠಿರಾದಿ ರಾಜರ್ಷಿಗಳ ಪಙ್ಕ್ತಿಗೆ ಸೇರಿಸತಕ್ಕುವಾಗಿವೆ. ಮಹಾಸ್ವಾಮಿಯವರ ಈ ಗುಣರತ್ನ ರಾಶಿಯ ನಿರ್ಮಲಕಾಂತಿಯು ಪ್ರಜೆಗಳಾದ ನಮಗೆ ಅತ್ಯಂತ ಗೌರವಾಸ್ಪದವಾಗಿ ಚಿತ್ತ ಸಮುನ್ನತಿ ಕಾರಕವಾಗಿರುವುದು, ಮಹಾಸ್ವಾಮಿ.

ಈಚೆಗೆ ಬ್ರಿಟಿಷ್ ಸಾರ್ವಭೌಮ ಸರ್ಕಾರದವರು ಸಹ ಮಹಾಸ್ವಾಮಿಯವರ ರಾಜ್ಯಭಾರ ಕ್ರಮದ ಉತ್ಕೃಷ್ಟತೆಯನ್ನೂ ಪ್ರಜಾನುರಾಗವನ್ನೂ ಉದಾತ್ತ ಸಂಕಲ್ಪಗಳನ್ನೂ, ಸದ್ಗುಣ ಸಂಪತ್ತನ್ನೂ ಮೆಚ್ಚಿ ಮಹಾಸ್ವಾಮಿಯವರ ಘನತೆಯನ್ನು ಲೋಕಕ್ಕೆ ಪ್ರಕಾಶಪಡಿಸಿರುತ್ತಾರೆ. ಆ ಮೆಚ್ಚಿಕೆಯನ್ನು ತೋರಿಸುವುದಕ್ಕೋಸ್ಕರ ಸಾರ್ವಭೌಮ ಪ್ರತಿನಿಧಿಗಳಾದ ಲಾರ್ಡ್ ಅರ್ವಿನ್ ಶ್ರೀಮಂತರವರು ನಮ್ಮ ಸಂಸ್ಥಾನದಿಂದ ಸಲ್ಲಬೇಕಾದ ಪೊಗದಿಯಲ್ಲಿ ೧೦॥ ಲಕ್ಷರೂಪಾಯಿಗಳಷ್ಟರ ಭಾಗವನ್ನು ಬಿಟ್ಟುಕೊಟ್ಟು, ಪರಸ್ಪರ ಮೈತ್ರಿಯನ್ನು ಮತ್ತಷ್ಟು ಅಭಿವೃದ್ಧಿಗೊಳಿಸಿರುವುದು ನಮಗೆಲ್ಲ ಅತ್ಯಂತ ಸಂತೋಷವನ್ನೂ ಹೆಮ್ಮೆಯನ್ನೂ ಉಂಟುಮಾಡಿರುತ್ತದೆ, ಮಹಾಸ್ವಾಮಿ.

ಶ್ರೀ ಮಹಾಸ್ವಾಮಿಯವರಿಗೂ, ಶ್ರೀಮದ್ಯುವರಾಜರವರಿಗೂ, ಶ್ರೀಮಹಾಮಾತೃಶ್ರೀಯವರಿಗೂ, ರಾಜಕುಂಟುಬದವರಿಗೂ ಜಗದೀಶ್ವರನು ಆಯುರಾರೋಗ್ಯ ಸೌಭಾಗ್ಯ ಸೌಖ್ಯಗಳನ್ನು ಅಮಿತವಾಗಿ ಕರುಣಿಸಲಿ. ಮಹಾಸ್ವಾಮಿಯವರು ಸರ್ವದಾ ಸರ್ವತ್ರ ಜಯಶಾಲಿಗಳಾಗಲಿ. ಮಹಾಸ್ವಾಮಿಯವರ ಕೀರ್ತಿ ದಶದಿಕ್ಕುಗಳಲ್ಲಿಯೂ ಹರಡಿ ಆಚಂದ್ರತಾರಕವಾಗಿ ಬೆಳಗಲಿ. ಮಹಾಸ್ವಾಮಿಯವರ ಧರ್ಮಪ್ರಭುತ್ವದ ಸುವರ್ಣ ಮಹೋತ್ಸವ ಸಮಯದಲ್ಲಿ ಈ ತೆರದ ಸಂಭ್ರಮದಿಂದ ಮತ್ತೆ ಮತ್ತೆ ಮಹಾಸ್ವಾಮಿಯವರನ್ನಭಿನಂದಿಸುವ ಸುಯೋಗವು ಪ್ರಜೆಗಳಾದ ನಮ್ಮದಾಗಿರಲಿ. ಸಮಸ್ತ ಸನ್ಮಂಗಳಗಳೂ

ನಮ್ಮ ಮಹಾರಾಜರವರಿಗೆ ಲಭಿಸಲಿ–ಇಂತೆಂಬುದೇ ಮಹಾಸ್ವಾಮಿಯವರ ಪ್ರಜಾಕೋಟಿಯ ಮನಃಪೂರ್ವಕವಾದ ಸಂತತ ಪ್ರಾರ್ಥನೆ.

ಮೈಸೂರು ಪಟ್ಟಣ<br>ಕ್ರಿಸ್ತಶಕ ೧೯೨೭ನೆಯ ಆಗಸ್ಟ್ }<br>೮ನೆಯ ದಿವಸ

ಇಂತು ಮಹೀಶೂರ ರಾಜ್ಯದ<br>ಪ್ರಜಾಮಂಡಲದ ವಿಜ್ಞಾಪನೆಗಳು.

ಶ್ರೀಮನ್ಮಹಾರಾಜರವರು ಶ್ರೀಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ., ಜಿ. ಬಿ. ಇ., ಮಹಾಸ್ವಾಮಿಯವರು, ತಮ್ಮ ರಾಜ್ಯಭಾರದ ರಜತಮಹೋತ್ಸವ ಸಮಾರಂಭದಲ್ಲಿ ಸಂಸ್ಥಾನದ ಪ್ರಜಾಮಂಡಲಿಯವರು ಒಪ್ಪಿಸಿದ ಅಭಿನಂದನಪತ್ರಿಕೆಗೆ, ಅಪ್ಪಣೆ ಕೊಡಿಸಿದ ಭಾಷಣ.

**ಪ್ರಿಯತಮರಾದ ಪ್ರಜಾಮಹಾಶಯರೆ,**

ನಿಮ್ಮಗಳಿಗೆ ನಮ್ಮ ವಿಷಯದಲ್ಲಿರುವ ಪ್ರೀತಿವಿಶ್ವಾಸಗಳನ್ನು ಪ್ರದರ್ಶಿಸತಕ್ಕ ಈ ಅಭಿನಂದನ ಪತ್ರಿಕೆಯನ್ನು ಬಹು ಆದರದಿಂದ ಸ್ವೀಕರಿಸುತ್ತೇವೆ. ಇದರಲ್ಲಿ ನೀವುಗಳು ತೋರ್ಪಡಿಸಿರುವ ಭಕ್ತಿ ಶ್ರದ್ಧೆಗಳು ನಮಗೆ ವಿಶೇಷವಾದ ಸಂತೋಷವನ್ನುಂಟುಮಾಡಿದೆ.

ಭಗವಂತನು ಮೈಸೂರು ದೇಶಕ್ಕೆ ನಾನಾವಿಧವಾದ ಸಂಪತ್ತುಗಳನ್ನು ಅನುಗ್ರಹಿಸಿರುವುದಲ್ಲದೆ, ವಿನಯಸಂಪನ್ನರೂ, ಉದಾರಚಿತ್ತರೂ, ಕಾರ್ಯಾಸಕ್ತರೂ ಆದ ಪ್ರಜೆಗಳನ್ನೂ ದಯೆಪಾಲಿಸಿರುವನು. ಮೈಸೂರು ಸಂಸ್ಥಾನಕ್ಕೆ ಮಾದರಿಸಂಸ್ಥಾನವೆಂದು ಬಂದಿರುವ ಖ್ಯಾತಿಗೂ, ಸಾರ್ವಭೌಮ ಸರ್ಕಾರವು ಈಗತಾನೇ ತೋರಿಸಿರುವ ಘನವಾದ ಪುರಸ್ಕಾರಕ್ಕೂ, ನಿಮ್ಮಗಳ ಪ್ರೀತಿಪೂರ್ವಕವಾದ ಸಹಕಾರವೇ ಮುಖ್ಯ ಕಾರಣವಾಗಿರುವುದು.

ಇದೇ ರೀತಿಯಲ್ಲಿ ಮುಂದೆಯೂ ನಾವೆಲ್ಲರೂ ಕಲೆತು, ಸಹೋದರ ಭಾವದಿಂದ ಕಾರ್ಯಗಳನ್ನು ನಡೆಸಿ, ಕೃಷಿ, ಕೈಗಾರಿಕೆ, ವಾಣಿಜ್ಯಗಳಿಗೆ ಹೆಚ್ಚು ಸೌಕರ್ಯವನ್ನು ಒದಗಿಸಿ, ಎಲ್ಲರ ಅಭಿವೃದ್ಧಿಗೂ ಸಮವಾಗಿ ಅವಕಾಶವನ್ನು ಕೊಡುತ್ತ, ನವೀನಕಾಲದಲ್ಲಿ ಉತ್ತಮಸ್ಥಿತಿಗೆ ಬಂದಿರುವ ದೇಶಗಳ ಸಮಕ್ಕೆ ಮೈಸೂರು ದೇಶವನ್ನು ತರಲು, ನಮ್ಮ ಶಕ್ತಿಸಾಹಸಗಳನ್ನೆಲ್ಲಾ ಉಪಯೋಗಿಸಬೇಕಾಗಿರುವುದು.

ಈ ಮಹತ್ತಾದ ಕಾರ್ಯದಲ್ಲಿ, ಎಲ್ಲಾ ಪಂಗಡದವರೂ ನಮ್ಮ ಪ್ರಜೆಗಳೇ, ಒಂದು ದೇಶದಲ್ಲಿ ಜನಿಸಿದವರೇ, ಎಂಬುದನ್ನು ನೆನಪಿನಲ್ಲಿಟ್ಟು, ಮುಂದಾದವರು ತಮ್ಮಷ್ಟು ಅಭಿವೃದ್ಧಿಸ್ಥಿತಿಗೆ ಇನ್ನು ಬಾರದಿರುವವರಿಗೆ ಸಹಾಯಕರಾಗಬೇಕೆಂಬುದು ನಮ್ಮ ಅಭಿಲಾಷೆಯಾಗಿರುತ್ತದೆ.

ಮುಂದೆ ವೃದ್ಧಿಗೆ ಬರುವವರಾಗಿರುವ ಯುವಕಸಮುದಾಯದವರೂ, ಸಹೋದರ ಭಾವವನ್ನೂ, ಪ್ರಜಾಧರ್ಮವನ್ನೂ, ತಮ್ಮ ದೃಷ್ಟಿಯಲ್ಲಿಟ್ಟುಕೊಂಡು, ನಮ್ಮ ಪ್ರೀತಿಗೆ ವಿಷಯವಾದ ಮಾತೃಭೂಮಿಯ ಶ್ರೇಯಸ್ಸಾಧನೆಗಾಗಿ ಯತ್ನಿಸಬೇಕೆಂದು ಬಯಸುತ್ತೇವೆ.

ತಮ್ಮ ಸಂಕಟಗಳನ್ನು ಕಂಠೋಕ್ತವಾಗಿ ಹೇಳಿಕೊಳ್ಳಲಾರದ ಪ್ರಾಣಿಗಳ ವಿಷಯದಲ್ಲಿ ಕನಿಕರವನ್ನು ತೋರಿಸಬೇಕೆಂದು ಈ ಸಂದರ್ಭದಲ್ಲಿ ಸೂಚಿಸಲಿಚ್ಛೈಸುತ್ತೇವೆ.

ಪ್ರಜೆಗಳ ಸೌಖ್ಯವೇ ನಮ್ಮ ಸೌಖ್ಯವೆಂದು ನಾವು ಸದಾ ಭಾವಿಸಿಕೊಂಡಿರುತ್ತೇವೆ. ಅಂತಹ ಸೌಖ್ಯಸಾಧನೆಗೆ ಆವಶ್ಯಕವಾದ ವಿವೇಕ, ಸ್ಥಿರಸಂಕಲ್ಪ, ಸಹಾಯಸಂಪತ್ತು ಇವುಗಳನ್ನು ನಮಗೆ ಅನುಗ್ರಹಿಸಲೆಂದು ಕರುಣಾಮಯನಾದ ಭಗವಂತನನ್ನು ನಿರಂತವೂ ಪ್ರಾರ್ಥಿಸುತ್ತಿರುವೆವು.

ಇದೇ ಸಂದರ್ಭದಲ್ಲಿ ಶ್ರೀಮನ್ಮಹಾರಾಜರವರು ಮೈಸೂರು ಅರಮನೆಯಿಂದ (೮ನೆಯ ಆಗಸ್ಟ್ ೧೯೨೭ರಲ್ಲಿ) ಸಂಸ್ಥಾನದ ಪ್ರಜೆಗಳಿಗೆ ಕೊಟ್ಟಿರುವ ಸಂದೇಶವೇ ಮಹಾಸ್ವಾಮಿಯವರಲ್ಲಿ ತುಂಬಿರುವ ಸುಗುಣಗಳನ್ನು ವ್ಯಕ್ತಗೊಳಿಸುತ್ತದೆ.

ನಮ್ಮ ರಾಜ್ಯಭಾರವು ಪ್ರಾರಂಭವಾಗಿ ಇಪ್ಪತ್ತೈದು ವರ್ಷಗಳು ಪೂರ್ಣವಾದ ಈ ದಿವಸ ನಾವು ನಮ್ಮ ಪ್ರೀತಿಗೆ ಪಾತ್ರರಾದ ಪ್ರಜೆಗಳಲ್ಲಿ ಪ್ರತಿಯೊಬ್ಬರೂ ಸುಖವಾಗಿರಲೆಂದು ಹೃದಯದಲ್ಲಿ ಹಾರೈಸುತ್ತ, ಈ ಶುಭಾಭಿಕಾಂಕ್ಷೆಯನ್ನು ಪ್ರೇಮಪುರಸ್ಸರವಾಗಿ ಪ್ರಕಾಶಗೊಳಿಸುವೆವು. ನಮ್ಮ ಪ್ರಜೆಗಳ ಸುಖಸಂಪತ್ತುಗಳನ್ನು ಅಭಿವೃದ್ಧಿ ಗೊಳಿಸಲು ಯಾವಜ್ಜೀವವೂ ಸಂತತವಾದ ಪ್ರಯತ್ನವನ್ನು ಮಾಡುವೆವು.

"ನಮ್ಮ ಜೀವಿತಕಾಲದಲ್ಲಿಯೂ ರಾಜ್ಯಭಾರದಲ್ಲಿಯೂ ಪರಮಧ್ಯೇಯವಾದ ಈ ಪ್ರಯತ್ನವನ್ನು ಈಡೇರಿಸಲು ತಕ್ಕ ಬುದ್ಧಿಶಕ್ತಿಯನ್ನೂ ಕಾಯಶಕ್ತಿಯನ್ನೂ ನಮಗೆ ದಯೆಪಾಲಿಸಲೆಂದು ಸರ್ವಶಕ್ತನಾದ ಭಗವಂತನನ್ನು ಪ್ರಾರ್ಥಿಸುವೆವು."

ಶ್ರೀಕೃಷ್ಣ

ಈ ವಿಶೇಷೋತ್ಸವ ಸಮಯದಲ್ಲಿ ಮೈಸೂರು ಮತ್ತು ಬೆಂಗಳೂರು ಪಟ್ಟಣಗಳಲ್ಲಿ ಶ್ರೀಮನ್ಮಹಾರಾಜರವರ ಮೆರವಣಿಗೆ ಬಹು ಸಂಭ್ರಮದಿಂದ ನಡೆಯಿತು. ಸಂಸ್ಥಾನದ ನಾನಾಕಡೆಗಳಿಂದಲೂ ಇತರ ದೇಶಗಳಿಂದಲೂ ಲಕ್ಷೋಪಲಕ್ಷಜನರು ಬಂದು ಈ ಉತ್ಸವವನ್ನು ನೋಡಿ ಆನಂದಪಟ್ಟರು. ಇಂತಹ ಮಹೋತ್ಸವವು ನಡೆದುದು ನಮ್ಮ ಮೈಸೂರು ಸಂಸ್ಥಾನದ ಚರಿತ್ರೆಯಲ್ಲಿ ಇದು ಮೊದಲನೆಯಸಲವಾಗಿದೆ.

## ೯. ಶ್ರೀಮನ್ಮಹಾರಾಜರವರ ಮಾನಸಸರೋವರ ಮತ್ತು ಕೈಲಾಸಕ್ಷೇತ್ರ ಯಾತ್ರೆ

ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರು ಕರ್ಮ ಧರ್ಮಗಳೆರಡಕ್ಕೂ ಏಕರೀತಿಯಾಗಿ ಗಮನ ಕೊಟ್ಟುಕೊಂಡು ಮೈಸೂರು ರಾಜ್ಯವನ್ನು ರಾಮರಾಜ್ಯವಾಗಿ ಮಾಡಿ, ರಾಜಋಷಿಗಳೆಂದು ಭಾರತ ಭೂಮಿಯಲ್ಲಿ ಪ್ರಖ್ಯಾತರಾಗಿರುವರು. ಇವರಿಗೆ ಪುಣ್ಯಕ್ಷೇತ್ರಗಳಿಗೆ ಹೋಗಿ ಯಾತ್ರೆಮಾಡಿಕೊಂಡು ಬರುವುದೆಂದರೆ ಬಲು ಇಷ್ಟ. ಇವರು ಮಾನಸಸರೋವರ ಮತ್ತು ಕೈಲಾಸಕ್ಷೇತ್ರ ಯಾತ್ರೆಯನ್ನು ಮಾಡಬೇಕೆಂದು ಬಯಸಿದವರಾಗಿ, ಮಿತ ಪರಿವಾರದೊಂದಿಗೆ ೧೯೩೧ನೆಯ ಜೂನ್ ತಿಂಗಳು ೧೮ನೆಯ ತಾರೀಖು ಗುರುವಾರದದಿನ ಮೈಸೂರಿನಿಂದ ಹೊರಟು ಗುಂತಕಲ್ಲು ಮಾರ್ಗವಾಗಿ ಬೊಂಬಾಯನ್ನು ೨೦ನೆಯ ತಾರೀಖು ಪ್ರಾತಃಕಾಲ ಸೇರಿದರು. ಅದೇ ರಾತ್ರಿ ಅಲ್ಲಿಂದ ಹೊರಟು ಮರುದಿನ ಸಾಯಂಕಾಲ ಮಥುರಾಪುರವನ್ನು ತಲುಪಿದರು. ತಿರುಗಿ ಆರಾತ್ರಿ ಮಥುರೆಯನ್ನು ಬಿಟ್ಟು ಕಾತ್‌ಗೋದಾಮ್ ಎಂಬ ಸ್ಥಳವನ್ನು ಸೇರಿದರು. ಅಲ್ಲಿಂದ ಮುಂದೆ ರೈಲು ಇಲ್ಲದುದರಿಂದ ಆಳುವ ಮಾಹಾಸ್ವಾಮಿಯವರು ತಮ್ಮ ಪರಿವಾರದೊಂದಿಗೆ ಮೋಟಾರಿನಲ್ಲಿ ರಾಣೀಖೇಟ್ ಮಾರ್ಗವಾಗಿ ಆಲ್ಮೋರಾಕ್ಕೆ ಹೋದರು. ಅಲ್ಲಿ ಎರಡು ದಿನಗಳಿದ್ದು ಮುಂದಿನ ಪ್ರಯಾಣಕ್ಕೆ ಬೇಕಾದ ಉಡುಪುಗಳೊಂದಿಗೆ ಸರ್ವರೂ ಸಿದ್ಧರಾದರು.

ಜೂನ್ ೨೭ನೆಯ ತಾರೀಖಿನ ದಿನ ಪ್ರಾತಃಕಾಲ ಶ್ರೀಮನ್ಮಹಾರಾಜರವರು ಅಶ್ವಾರೂಢವಾಗಿ ಇತರರೊಂದಿಗೆ ಪ್ರಯಾಣಹೊರಟು, ಬಾರೀಚೀನ ಎಂಬ ಪ್ರದೇಶವನ್ನು ಸೇರಿ, ಅಲ್ಲಿಂದ ಮರುದಿನ ಪ್ರಾತಃಕಾಲ ಹೊರಟು ಕನೇರೀಚೀನಾ, ಗನಾಯಿ, ಬೆರಿನಾಗ್, ಥಾಲ್, ಸಾಂದೇವ್, ಆಸ್ಕೋಟ್, ಬಲವಾಕೋಟ್, ಧಾರ್ಚೂಲಾ, ಖೇಲಾ, ಥಿಥ್ಲಾ, ಗಲಾಗರ್, ಮಾಲ್ಪಾ, ಬೂದಿ, ಗರ್ಬಯಾಂಗ್, ಕಾಳ್‌ಪಾಣಿ, ಸಿಯಾಂಗ್‌ಥಂ, ಲಿಪುಲೇಕ್‌ಪಾಸ್, ತಾಕ್ಲಾಕೋಟ್, ರನ್‌ಗನ್‌ಗ್, ಗೋರಿಓಡಿಯಾಲ್ ಮಾರ್ಗವಾಗಿ ಜುಲೈ ೨೨ನೆಯ ತಾರೀಖಿನ ದಿನ ಮಾನಸಸರೋವರದ ಬಳಿಗೆ ಬಂದರು.

ಶ್ರೀಮನ್ಮಹಾರಾಜರವರೂ ಅವರ ಪರಿಜನರಲ್ಲಿ ಕೆಲವರೂ ಮಾನಸ ಸರೋವರ ದಲ್ಲಿ* ಸ್ನಾನಮಾಡಿ, ಶಾಸ್ತ್ರೋಕ್ತವಾಗಿ ತರ್ಪಣಾದಿಗಳನ್ನು ಆಚರಿಸಿದರು. ಇವರು ಬೀಡಾರ ಮಾಡಿದ್ದ ಸ್ಥಳವು ಸಮುದ್ರಮಟ್ಟಕ್ಕಿಂತ ಸುಮಾರು ೧೫,೦೦೦ ಅಡಿಗಳು ಎತ್ತರವಿತ್ತು.

ಮಾರನೆಯ ದಿನ ಬೆಳಗ್ಗೆ ಮಹಾಸ್ವಾಮಿಯವರು ಪರಿವಾರದೊಂದಿಗೆ ಮಾನಸಸರೋವರದ ಅಂಚಿನಲ್ಲಿಯೇ ಉತ್ತರಕ್ಕೆ ಹೊರಟು, ೧೧ಮೈಲಿಗಳು ಪ್ರಯಾಣಮಾಡಿ, ಮಾನಸಸರೋವರದ ದಡದಲ್ಲಿ ಸಿದ್ಧಪಡಿಸಿದ್ದ ಡೇರಾದಲ್ಲಿ ಬೀಡಾರ ಮಾಡಿದರು. ಮರುದಿನ ಬೆಳಗ್ಗೆ ಪುನಃ ಅಲ್ಲಿಂದ ಹೊರಟು ೮-೩೦ ಘಂಟೆಗೆ ಪಾ[illegible]ಯವು

---

* ಬ್ರಹ್ಮನು, ಹಿಮವತ್ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದಾಗ್ಗೆ, ತನ್ನ ನಿತ್ಯ ಕರ್ಮಾಚರಣೆಗಾಗಿ ಮನಸ್ಸಿನ ಸಂಕಲ್ಪಮಾತ್ರದಿಂದ ಈ ಸರೋವರವನ್ನು ಸೃಷ್ಟಿಸಿದನು. ಆದುದರಿಂದ ಇದಕ್ಕೆ ಬ್ರಹ್ಮ ಮಾನಸಸರೋವರವೆಂದು ಹೆಸರುಬಂದಿದೆ.

ಕೈಲಾಸಪರ್ವತದ ತಪ್ಪಲಿನಲ್ಲಿರುವ ಬಾರ್ಖಾ ಮೈದಾನವನ್ನು ಸೇರಿತು. ಇಲ್ಲಿಂದ ಮೋಡವಿಲ್ಲದ ಹಗಲಿನಲ್ಲಿ ಕೈಲಾಸ ಶಿಖರವನ್ನು ಸ್ಪಷ್ಟವಾಗಿ ನೋಡಬಹುದು. ಈ ಪ್ರದೇಶದಿಂದ ೨೫ನೆಯ ತಾರೀಖಿನ ದಿನ ಹೊರಟು, ಏಳು ಮೈಲಿಗಳ ದೂರದಲ್ಲಿ ಕೈಲಾಸ ಪರ್ವತದ ಪಾದಪ್ರಾಂತದಲ್ಲಿರುವ ದಾರ್‌ಚೆನ್ ಅಥವಾ ತಾರ್‌ಚೆನ್ ಎಂಬ ಗ್ರಾಮದಲ್ಲಿ ಹಾಕಿದ್ದ ಡೇರಾದಲ್ಲಿ ತಂಗಿದರು.

ಕೈಲಾಸ ಮಹಾಕ್ಷೇತ್ರವು ಅತ್ಯಂತ ಶೀತಮಯವಾದ ಹಿಮಾಲಯ ಪರ್ವತದ ಶ್ರೇಣಿಯಲ್ಲಿ ಇಂಡಿಯದ ಎಲ್ಲೆಯ ಆಚೆ ಟಿಬೆಟ್ಟಿನಲ್ಲಿದೆ. ಇದರ ದಕ್ಷಿಣಕ್ಕೆ ಮಾನಸಸರೋವರ ವಿರುವುದು. ಇದು ಸುಮಾರು ೪೫ ಮೈಲಿಯಷ್ಟು ವಿಸ್ತಾರವಾಗಿದೆ. ಈ ಎರಡು ಸ್ಥಳಗಳು ಹಿಂದು ಜನರಿಂದ ಮಾತ್ರವಲ್ಲದೆ ಬೌದ್ಧರಿಂದಲೂ ಅತಿ ಪವಿತ್ರವಾದವುಗಳೆಂದು ಭಾವಿಸಲ್ಪಟ್ಟಿವೆ.

ಕೈಲಾಸಪರ್ವತವು ಸುಮಾರು ೨೨,೦೦೦ಸಾವಿರ ಅಡಿ ಎತ್ತರದಲ್ಲಿದೆ. ಪರ್ವತವನ್ನು ಹಿಮವು ಸದಾ ಮುಚ್ಚಿಬಿಟ್ಟಿರುವುದು. ಇದರ ಶಿಖರವು ಶಿವನವಾಸಸ್ಥಾನ ವಾದುದರಿಂದ ಇಲ್ಲಿಗೆ ಹೋಗುವುದೂ, ಇದನ್ನು ದರ್ಶಿಸಿ ಪ್ರದಕ್ಷಿಣೆ ಮಾಡುವುದೂ, ಬಹಳ ಪುಣ್ಯವೆಂದೂ, ಮೋಕ್ಷಸಾಧನವೆಂದೂ ಯಾತ್ರಿಕರು ನಂಬಿರುತ್ತಾರೆ.

ಕೈಲಾಸಪರ್ವತಕ್ಕೆ ಪ್ರದಕ್ಷಿಣೆಮಾಡಲು ಬರುವ ಯಾತ್ರಿಕರು ಪರ್ವತವನ್ನು ಬಲಕ್ಕೆ ಬಿಟ್ಟುಕೊಂಡು, ಪ್ರದಕ್ಷಿಣೆಗೆ ಪ್ರಾರಂಭಿಸುವುದು ದಾರಚಿನ್ನಿನಿಂದಲೇ. ಶ್ರೀಮನ್ಮಹಾರಾಜರವರು ಇದರಂತೆಯೇ ಸಪರಿವಾರರಾಗಿ ಜುಲೈ ೨೬ನೆಯ ಪ್ರಾತಃಕಾಲ ೫-೩೦ ಘಂಟೆಗೆ ಇಲ್ಲಿಂದ ಪ್ರಾರಂಭಿಸಿ, ಒಂದು ದಿಣ್ಣೆಯ ಬುಡದಿಂದ ಬಲಗಡೆ ಹೊರಟು, ಕಣಿವೆಯಲ್ಲಿಳಿದು, ಮತ್ತೆ ಬಲಕ್ಕೆ ತಿರುಗಿ ೫-೬ ಮೈಲಿಗಳು ಬಂದು, ಕೈಲಾಸಪರ್ವತದ ದಕ್ಷಿಣ ಮತ್ತು ಪಶ್ಚಿಮ ಮುಖದ ಶಿಖರ ದರ್ಶನವನ್ನು ಪಡೆದು, ಸಾಯಂಕಾಲದ ವೇಳೆಗೆ ಕೈಲಾಸ ಪರ್ವತದ ಪಾದಪ್ರದೇಶವನ್ನು ಸೇರಿದರು. ಇಲ್ಲಿಂದ ಪರ್ವತವು ನೆಟ್ಟಗೆ ನಿಂತಿರುವುದರಿಂದ ನೋಡುವವರಿಗೆ ಲಿಂಗಾಕಾರವಾಗಿ ಕಾಣುವುದು.

ಜುಲೈ ೨೭ನೆಯ ತಾರೀಖಿನ ದಿನ ಪ್ರಾತಃಕಾಲವೇ ಎಲ್ಲರೂ ಕೈಲಾಸ ಪರ್ವತವನ್ನು ಪ್ರದಕ್ಷಿಣೆ ಮಾಡುವುದರಲ್ಲಿ ಎರಡನೆಯ ನಿಲ್ದಾಣವಾದ ಜೆಂಡಿಫುವಿಗೆ ಪ್ರಯಾಣ ಹೊರಟರು. ದಾರಿಯಲ್ಲಿ ಗೌರೀಕುಂಡವೆಂಬ ದಿಣ್ಣೆಯನ್ನು ಕೇವಲ ಆಯಾಸದಿಂದ ಹತ್ತಿ, ಅಲ್ಲಿಂದ ಆಚೆ ಇಳಿಯುವುದಕ್ಕೆ ಪ್ರಾರಂಭಿಸಿ, ಒಂದು ಕಣಿವೆಯ ಬುಡವನ್ನು ಸೇರಿ, ೧೦-೩೦ ಘಂಟೆಯ ಹೊತ್ತಿಗೆ ಜೆಂಡುಫುವಿಗೆ ಇದಿರಿನಲ್ಲಿ ಹಾಕಿದ್ದ ಡೇರೆಗಳಿಗೆ ಬಂದು ಸೇರಿದರು. ಮರುದಿನ ಪ್ರಾತಃಕಾಲ ಮುಂದಕ್ಕೆ ಪ್ರಯಾಣ ಹೊರಟು ಮತ್ತೆ ಬಾರ್ಖಾ ಮೈದಾನವನ್ನು ಸೇರಿದರು. ಇಲ್ಲಿಗೆ ಶ್ರೀ ಕೈಲಾಸಪರ್ವತ ಪ್ರದಕ್ಷಿಣೆ ಪೂರ್ತಿಯಾದ ಕಾರಣ ಬೀಡಾರದಲ್ಲಿದ್ದವರೆಲ್ಲರೂ ಪರಮಸಂತೋಷಭರಿತರಾಗಿದ್ದರು.

ಕೈಲಾಸವನ್ನು ಪ್ರದಕ್ಷಿಣೆ ಮಾಡುವುದಕ್ಕೆ ಸಾಧಾರಣವಾಗಿ ಎರಡೂವರೆ ದಿವಸಗಳು ಬೇಕು. ಭಕ್ತರು ದಾರಿಯುದ್ಧಕ್ಕೂ ನಮಸ್ಕಾರ ಮಾಡಿಕೊಂಡು ಪ್ರದಕ್ಷಿಣೆ ಮಾಡುವುದುಂಟು;

ಹೀಗೆ ಒಂದುಸಲ ಪ್ರದಕ್ಷಿಣೆಮಾಡಿಕೊಂಡು ಬರುವಹೊತ್ತಿಗೆ ಸುಮಾರು ಇಪ್ಪತ್ತೊಂಬತ್ತು ಮೈಲಿಗಳಾಗುತ್ತವೆ. ಈ ಪ್ರದಕ್ಷಿಣೆಯನ್ನು ಬರಿಯಕಾಲಲ್ಲಿ ಮಾಡುತ್ತಾರೆ. ಬಳಸುವಹಾದಿ, ಶಿಲಾಮಯವಾಗಿಯೂ ಬಹು ಒರಟಾಗಿಯೂ ಇರುವುದರಿಂದಲೂ, ದೇಶದ ಅತ್ಯಂತ ಶೈತ್ಯದಿಂದಲೂ, ಮಂಜುಗಡ್ಡೆ ಬೀಳುವುದರಿಂದಲೂ ಈ ಪ್ರದಕ್ಷಿಣೆ ಬಹು ಕಷ್ಟಸಾಧ್ಯವಾದುದು.

ಮಹಾಪವಿತ್ರವಾದ ಕ್ಷೇತ್ರಗಳೆಂದೂ, ಭಗವಂತನ ಲೀಲಾಸ್ಥಾನಗಳೆಂದೂ, ಅನಾದಿಯಾಗಿ ಪ್ರಖ್ಯಾತವಾಗಿರುವ ಇಂತಹ ಶ್ರೀಮಾನಸಸರೋವರ ಮತ್ತು ಕೈಲಾಸಕ್ಷೇತ್ರಗಳ ಯಾತ್ರೆಯನ್ನು ಆಳುವ ಮಹಾಸ್ವಾಮಿಯವರು ಮುಗಿಸಿಕೊಂಡು, ತಮ್ಮ ಪರಿವಾರದೊಂದಿಗೆ ಜುಲೈ ೨೯ನೆಯ ತಾರೀಖು ಬುಧವಾರದ ದಿನ ಸ್ವಸ್ಥಳವನ್ನು ಕುರಿತು ಹಿಂದಿರುಗುವ ಪ್ರಯಾಣಕ್ಕೆ ಪ್ರಾರಂಭಿಸಿದರು. ಮಾರ್ಗದಲ್ಲಿ ನಿಜಾಷಾಢಶುದ್ಧ ೧೫ (ವ್ಯಾಸ ಪೂರ್ಣಿಮಾ) ದಿನ ಮಾನಸಸರೋವರದ ಸ್ನಾನವನ್ನು ಮತ್ತೆ ಮಾಡಿಕೊಂಡು, ರಾಕ್ಷಸಸರೋವರದ ಮಾರ್ಗವಾಗಿ ತಾಕ್ಲಾಕೋಟನ್ನು ತಲುಪಿ, ಕೋಜಾರ್‌ನಾಥ್‌ನಲ್ಲಿರುವ ಬೌದ್ಧಮಠವನ್ನೂ, ಬೌದ್ಧಮತದ ಪುಸ್ತಕ ಭಂಡಾರವನ್ನೂ, ಮಠದಲ್ಲಿದ್ದ ಯತಿಗಳನ್ನೂ ನೋಡಿಕೊಂಡು, ಯತಿಗಳಿಗೆ ಕಾಣಿಕೆಯನ್ನು ಒಪ್ಪಿಸಿ, ಅಲ್ಲಿಂದ ತಾಕ್ಲಾಕೋಟೆಗೆ ಹಿಂದಿರುಗಿದರು.

ಪುನಃ ಮಾರನೆಯ ಪ್ರಾತಃಕಾಲ ಶ್ರೀಮನ್ಮಹಾರಾಜರವರು ಪರಿವಾರದೊಂದಿಗೆ ಅಲ್ಲಿಂದ ಹೊರಟು, ಬಂದ ದಾರಿಯನ್ನು ಅನುಸರಿಸಿ ಕಾಳಾಪಾಣಿಯನ್ನು ತಲುಪಿದರು. ಇಲ್ಲಿಗೆ ಟಿಬೆಟ್ ಸಂಚಾರವು ಮುಗಿದು, ಭರತಖಂಡದ ರಾಜ್ಯಕ್ಕೆ ಪ್ರವೇಶಿಸಿದುದು ಎಲ್ಲರಿಗೂ ಹರ್ಷವನ್ನುಂಟುಮಾಡಿತು.

ಆಗಸ್ಟ್ ೬ನೆಯ ತಾರೀಖು ಬೆಳಗ್ಗೆ ೫-೩೦ ಘಂಟೆಗೆ ಕಾಳಾಪಾಣಿಯನ್ನು ಬಿಟ್ಟು ಹಿಂದು ಹಿಂದಕ್ಕೆ ಪ್ರಯಾಣವನ್ನು ಬೆಳಿಸಿ, ಬಾಗೇಶ್ವರವೆಂಬ ಊರಿಗೆ ಆಗಸ್ಟ್ ೨೦ನೆಯ ತಾರೀಖಿನ ದಿನ ಸೇರಿದರು. ಇಲ್ಲಿಯ ಪುರಜನರು ಶ್ರೀಮನ್ಮಹಾರಾಜರವರಿಗೆ ಆದರಪುರಸ್ಸರವಾದ ಸುಸ್ವಾಗತವನ್ನಿತ್ತು ವಿಜ್ಞಾಪನಾಪತ್ರಿಕೆಯನ್ನು ಒಪ್ಪಿಸಿದರು.

ಮಾರನೆಯದಿನ ಪ್ರಾತಃಕಾಲ ೫೦-೩೦ ಘಂಟೆಗೆ ಪಾಳೆಯದವರೆಲ್ಲಾ ಬಾಗೇಶ್ವರದಿಂದ ಹೊರಟು, ಬಿನ್‌ಸಾರದ ಮಾರ್ಗವಾಗಿ ೨೪ನೆಯ ತಾರೀಖಿನ ದಿನ ಬೆಳಗ್ಗೆ ೧೦-೩೦ಘಂಟೆಗೆ ಆಲ್ಮೋರಾವನ್ನು ಸೇರಿದರು. ಇಲ್ಲಿ ಮಹಾಸ್ವಾಮಿಯವರು ಎರಡು ದಿನಗಳಿದ್ದು, ಪ್ರಮುಖರಿಗೆಲ್ಲ ದರ್ಶನವನ್ನಿತ್ತು, ಅನೇಕರಿಗೆ ಉಡುಗೊರೆಗಳನ್ನೂ, ಪಾರಿತೋಷಕಗಳನ್ನೂ ಕೊಟ್ಟು ಸಂತೋಷಪಡಿಸಿದರು. ಇಲ್ಲಿಂದ ೨೭ನೆಯ ತಾರೀಖು ಬೆಳಗ್ಗೆ, ಪರಿಜನರೊಂದಿಗೆ ಮೋಟಾರಿನಲ್ಲಿ ಪ್ರಯಾಣಹೊರಟು, ಮಧ್ಯಾಹ್ನ ೩-೩೦ಕ್ಕೆ ಕಾಥ್‌ಗೋದಾಂವನ್ನು ಸೇರಿದರು. ಅಲ್ಲಿಂದ ಮರುದಿನ ಪ್ರಾತಃಕಾಲ ರೈಲಿನಲ್ಲಿ ಹರಿದ್ವಾರಕ್ಕೆ ಬಂದು, ಆರಾತ್ರಿ ಪುನಃ ಅಲ್ಲಿಂದ ಹೊರಟು, ಡೆಲ್ಲಿಯ ಮಾರ್ಗವಾಗಿ ಬೊಂಬಾಯಿಪಟ್ಟಣಕ್ಕೆ ಬಂದು ಸೇರಿದರು.

ಬೊಂಬಾಯಿಯಲ್ಲಿ ಕೆಲವು ದಿನಗಳಿದ್ದು, ಶ್ರೀಮನ್ಮಹಾರಾಜರವರು ಸೆಪ್ಟಂಬರ್ ೪ನೆಯ ತಾರೀಖು ರಾತ್ರಿ ಅಲ್ಲಿಂದ ಹೊರಟು, ಪೂನಾಪಟ್ಟಣವನ್ನು ಸೇರಿ, ಅಲ್ಲಿಂದ

ಅರಸೀಕೆರೆಗೆ ಬಂದು, ಹಾಸನದ ಮಾರ್ಗವಾಗಿ ಬೆಳಗುಳಕ್ಕೆ ಪ್ರಯಾಣಮಾಡಿ, ಅಲ್ಲಿಂದ ಮೋಟಾರಿನಲ್ಲಿ ಬೆಂಗಳೂರನ್ನು ತಲುಪಿ, ಅಲ್ಲಿ ಶ್ರೀಮನ್ಮಹಾಮಾತ್ಯಶ್ರೀವಾಣೀವಿಲಾಸ ಸನ್ನಿಧಾನದವರ ಸಂದರ್ಶನವನ್ನು ಪಡೆದು, ಕೆಲವು ದಿನಗಳಿದ್ದು, ಸೆಪ್ಟಂಬರ್ ೧೬ನೆಯ ತಾರೀಖು ರಾಜಧಾನಿಗೆ ಹಿಂದುರುಗಿ, ಶ್ರೀಚಾಮುಂಡೇಶ್ವರಿಯ ಸಂದರ್ಶನವನ್ನು ಹೊಂದಿದರು. ತರುವಾಯ ಮಹಾಸ್ವಾಮಿಯವರ ದರ್ಶನಕ್ಕಾಗಿ ಕಾತುರರಾಗಿದ್ದ ಸಾವಿರಾರುಮಂದಿ ಪ್ರಜೆಗಳ ಮನೋರಥವನ್ನು ಈಡೇರಿಸಿದರು.

❧

## ೧೦. ಬೆಂಗಳೂರಿನ ಭಾಗ್ಯ

೧೯೩೩ನೆಯ ಇಸವಿ ಮಾರ್ಚಿ ತಿಂಗಳಲ್ಲಿ ಬೆಂಗಳೂರು ನಗರವು ಶ್ರೀಮನ್ಮಹಾರಾಜರವರ ಸಾನ್ನಿಧ್ಯ ವಿಶೇಷದಿಂದಲೂ, ಅವರ ಅನುಗ್ರಹ ಪೂರ್ವಕವಾದ ಉತ್ಸಾಹ ಸನ್ನಿವೇಶಗಳಿಂದಲೂ, ಶೋಭಾಯಮಾನವಾಗಿ ಕಂಗೊಳಿಸಿತು. ಮಾರ್ಚಿ ತಿಂಗಳ ೭ನೆಯ ತಾರೀಖಿನ ದಿನ ಶ್ರೀ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರ ನಗರಭವನದ* ಶಂಕು ಸ್ಥಾಪನೆಯನ್ನು ಶ್ರೀಮನ್ಮಹಾರಾಜರವರು ನೆರವೇರಿಸಿದರು. ೮ನೆಯ ತಾರೀಖಿನಲ್ಲಿ ವೃತ್ತಿ ಶಿಕ್ಷಣ ಮಂದಿರದ ಶಂಕುಸ್ಥಾಪನೋತ್ಸವವು ನೆರವೇರಿತು. ೧೫ನೆಯ ತಾರೀಖಿನ ದಿನ ತಿಪ್ಪಗೊಂಡನಹಳ್ಳಿ ಜಲಾಶಯದ ಧಾರಾಪ್ರವಾಹೋತ್ಸವವೂ, ಪೌರಸಭಾ ಭವನದ ಶಂಕುಸ್ಥಾಪನೆಯೂ ನಡೆದುವು. ಈ ಉತ್ಸವಗಳಲ್ಲಿ ಆಳುವ ಮಹಾಸ್ವಾಮಿಯವರು ಭಾಗಿಗಳಾಗಿ, ಪ್ರಜೆಗಳ ವಿಷಯದಲ್ಲಿಯೂ, ಬೆಂಗಳೂರಿನ ವಿಷಯದಲ್ಲಿಯೂ, ತಮ್ಮ ಅತಿಶಯವಾದ ಅಭಿಮಾನವನ್ನು ವ್ಯಕ್ತಗೊಳಿಸಿದರು. ಈ ಸಂದರ್ಭಗಳಲ್ಲಿ ಶ್ರೀಮನ್ಮಹಾರಾಜರವರು ಮಾಡಿದ ಭಾಷಣಗಳು ದೇಶಾಭಿಮಾನದಿಂದ ತುಂಬಿ ತುಳುಕುತ್ತಲಿವೆ.

ಮೈಸೂರು ಇಂಜಿನಿಯರುಗಳು ತಮ್ಮ ಸ್ವಂತ ಉದ್ಯಮದಿಂದ ನಿರ್ವಹಿಸಿ ನಡೆಯಿಸಿರುವ ಮಹಾಕಾರ್ಯಗಳಲ್ಲಿ ತಿಪ್ಪಗೊಂಡನಹಳ್ಳಿ ಜಲಾಶಯವು ಅತ್ಯಂತ ಪ್ರಖ್ಯಾತವೂ ನವೀನವೂ ಆಗಿದೆ. ಈ ಜಲಾಶಯವನ್ನು ನಿರ್ಮಿಸಿದ ಮೈಸೂರಿನವರೂ, ಜಗದ್ವಿಖ್ಯಾತರೂ ಆದ ಶ್ರೀಯುತ ಸರ್. ಎಂ. ವಿಶ್ವೇಶ್ವರಯ್ಯನವರನ್ನು ಯಾರೂ ಮರೆಯುವಹಾಗಿಲ್ಲ. ವೃತ್ತಿಶಿಕ್ಷಣ ಮಂದಿರದ ಭಾವನೆಯೂ ಶ್ರೀ ಸರ್ ಎಂ. ವಿಶ್ವೇಶ್ವರಯ್ಯನವರ ಮೇಧಾಶಕ್ತಿಯಿಂದಲೇ ಉದ್ಭವಿಸಿದುದು.

ಶ್ರೀಮನ್ಮಹಾರಾಜರವರ ಆಳ್ವಿಕೆಯ ರಜತ ಮಹೋತ್ಸವದ ಸವಿನೆನಪು ಸಂಸ್ಥಾನದ ಪ್ರಜೆಗಳ ಮನಸ್ಸಿನಲ್ಲಿ ಖಚಿತವಾಗಿ ನಿಲ್ಲುವಂತೆ ಶಾಶ್ವತವಾದ ಏರ್ಪಾಡನ್ನು ಮಾಡಬೇಕೆಂಬ ಉದ್ದೇಶದಿಂದ ಏರ್ಪಟ್ಟ ವಿಶೇಷ ಸಮಿತಿಯವರು, ರಜತ ಮಹೋತ್ಸವದ ಸ್ಮಾರಕವು ವೃತ್ತಿಶಿಕ್ಷಣ ಕಲಾ ಶಾಲೆಯ ರೂಪದಲ್ಲಿರುವುದೇ ಉತ್ತಮವೆಂದು ತೀರ್ಮಾನಿಸಿದರು.

ಈ ನಿರ್ಣಯವು ಕಾರ್ಯಕಾರಿಯಾಗುವ ವಿಚಾರದಲ್ಲಿ ಸಂಸ್ಥಾನದ ದಿವಾನರವರಾದ ಶ್ರೀ ಅಮೀನ್‌ಉಲ್‌ಮುಲ್ಕ್ ಸರ್ ಮಿರ್ಜಾ ಮಹಮದ್ ಇಸ್ಮಾಯಿಲ್ ರವರು ಏಕಪ್ರಕಾರವಾದ ಆಸಕ್ತಿಯನ್ನು ವಹಿಸಿ, ತಮಗೆ ಮಹಾಸ್ವಾಮಿಯವರಲ್ಲಿರುವ ಗಾಢವಾದ ಭಕ್ತಿ ವಿಶ್ವಾಸಗಳನ್ನು ಪ್ರದರ್ಶಿಸಿರುತ್ತಾರೆ.

ಈ ಶಿಕ್ಷಣ ಶಾಲೆಯ ಅಸ್ತಿಭಾರ ಶಿಲೆಯನ್ನು ಶ್ರೀಮನ್ಮಹಾರಾಜರವರು ತಮ್ಮ ಅಮೃತ ಹಸ್ತದಿಂದ ಪ್ರತಿಷ್ಠಿಸುವಂತೆ ಕಾರ್ಯನಿರ್ವಾಹಕ ಮಂಡಲಿಯ ಅಧ್ಯಕ್ಷರಾದ

---

* ಈ ಭವನದ ಪ್ರವೇಶೋತ್ಸವವನ್ನು ಶ್ರೀಮದ್ಯುವರಾಜರಾದ ಶ್ರೀಕಂಠೀರವ ನರಸಿಂಹರಾಜ ಒಡೆಯರವರು ೧೯೩೫ನೆಯ ಸೆಪ್ಟಂಬರ್ ೧೧ನೆಯ ತಾರೀಖಿನ ದಿನ ನೆರವೇರಿಸಿದರು.

ಶ್ರೀಯುತ ಸರ್. ಕೆ. ಪಿ. ಪುಟ್ಟಣಶೆಟ್ಟರವರು ಅವರನ್ನು ಸದಸ್ಯರ ಪರವಾಗಿ ಪ್ರಾರ್ಥಿಸಲು, ಓದಿದ ಬಿನ್ನವತ್ತಳೆಯಲ್ಲಿ, "ಈ ಸಮಿತಿಯ ಪರವಾಗಿಯೂ, ನನಗೆ ಸಂಬಂಧವಿರುವ ಇದೇ ವಿಷಯಕವಾದ ಇತರ ಸಮಿತಿಗಳ ಪರವಾಗಿಯೂ ಒಂದು ಸಂಗತಿಯನ್ನು ಶೃತಪಡಿಸಲು ಮಹಾಸ್ವಾಮಿಯವರ ಅನುಜ್ಞೆಯನ್ನು ಬೇಡುತ್ತೇನೆ. ರಜತ ಮಹೋತ್ಸವವನ್ನು ನೆರವೇರಿಸಿ ಅದರ ಸವಿನೆನಪು ಬೆಂಗಳೂರು, ಮೈಸೂರು ನಗರಗಳಲ್ಲಿಯೂ, ಡಿಸ್ಟ್ರಿಕ್ಟ್ ಮತ್ತು ತಾಲ್ಲೂಕು ಮುಖ್ಯ ಸ್ಥಳಗಳಲ್ಲಿಯೂ, ಗ್ರಾಮಗಳಲ್ಲಿಯೂ, ಹಳ್ಳಿಗಳಲ್ಲಿಯೂ, ಅಂತೂ ಒಟ್ಟು ಸಂಸ್ಥಾನದಲ್ಲಿ ಅಚ್ಚಳಿಯದೆ ಶಾಶ್ವತವಾಗಿ ಕಂಗೊಳಿಸುವಂತೆ ಏರ್ಪಾಡು ಮಾಡುವ ಪ್ರಿಯುತಮವಾದ ಈ ದೊಡ್ಡ ಪ್ರಯತ್ನದಲ್ಲಿ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಭಾಗಿಗಳಾಗಿರುವ ಸ್ತ್ರೀಪುರುಷರು ಸಮಸ್ತರಿಗೂ ಈ ಮಹಾಕಾರ್ಯವು ಯಶಸ್ವಿಯಾಗಿ ನೆರವೇರುವಂತೆ ಕೆಲಸಮಾಡುವುದಕ್ಕಿಂತಲೂ ಮತ್ತಾವುದೂ ಹೆಚ್ಚು ಸಂತೋಷ ಕರವಾಗಿಲ್ಲ. ಮಹಾಸ್ವಾಮಿಯವರ ಪ್ರಜೆಗಳು, ಮಹಾಪ್ರಭುಗಳವರೇ ತಮ್ಮ ಅಂತರಾತ್ಮವಾಗಿದ್ದಂತೆ ಭಾವಿಸಿ, ಮನಸ್ಸಾಕ್ಷಿಯಂತೆ ವರ್ತಿಸುತ್ತ, ತಮ್ಮ ಜೀವನವನ್ನು ಸಾರ್ಥಕಗೊಳಿಸಬೇಕೆಂಬ ಆಶೆಯಿಂದ ಕೂಡಿದ್ದಾರೆ.

"ಮಹಾಪ್ರಭುಗಳವರು ಕೃಪೆಮಾಡಿ ಈ ದಿನ ಶಂಕುಸ್ಥಾಪನೆ ಮಾಡುವ ಶಿಕ್ಷಣಶಾಲೆಯ ಏರ್ಪಾಡು ಸ್ಥೂಲವಾಗಿ ಈ ರೀತಿಯಲ್ಲಿದೆ. ಸಂಸ್ಥಾನದಲ್ಲಿ ಜೀವನಕ್ಕೆ ಸಹಾಯಕವಾದ ವೃತ್ತಿಗಳು ವಿವಿಧ ರೂಪವನ್ನು ತಳೆದು ವೃದ್ಧಿ ಹೊಂದಬೇಕಾದುದೂ ಮತ್ತು ವಿದ್ಯಾಭ್ಯಾಸ ಕ್ರಮದಲ್ಲಿ ಗ್ರಂಥಬೋಧನೆಗಿಂತಲೂ ಹೆಚ್ಚಾಗಿ ಕಾರ್ಯತಃ ಪ್ರಯೋಜನಕರವಾದ ಅಂಶಗಳನ್ನು ಕಲಿಸುವ ಏರ್ಪಾಡು ಈಗಿರುವುದಕ್ಕಿಂತಲೂ ಇನ್ನು ಮುಂದೆ ಹೆಚ್ಚಾಗಿ ನಡೆಯಬೇಕಾದುದೂ, ಆವಶ್ಯಕ. ಆದಕಾರಣ ಈ ವೃತ್ತಿಶಿಕ್ಷಣ ಶಾಲೆಯು ಮುಂದೆ ವಿಶೇಷ ಪ್ರಯೋಜನಕರವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲವೆಂಬುದನ್ನು ಸೂಚಿಸಲು ಅಪ್ಪಣೆಯನ್ನು ಬೇಡುತ್ತೇವೆ. ಈಗ ವ್ಯವಸ್ಥೆ ಮಾಡಿರುವಂತೆ ಸದ್ಯಕ್ಕೆ ಈ ಶಾಲೆಯಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್, ಎಲೆಕ್ಟ್ರಿಕಲ್ ಇಂಜಿನಿಯರಿಂಗ್ ಮತ್ತು ನೇಯ್ಗೆಯ ಕೆಲಸ ಇವುಗಳನ್ನು ಬೋಧಿಸುವ ಏರ್ಪಾಡನ್ನು ಮಾಡಲಾಗುವುದು. ರಸಾಯನ ಶಾಸ್ತ್ರ ಸಂಬಂಧವಾದ ನಾನಾ ಕೈಗಾರಿಕೆಗಳನ್ನು ಕಲಿಸುವ ಏರ್ಪಾಡನ್ನು ಮುಂದೆ ಸೇರಿಸಬೇಕೆಂಬ ಉದ್ದೇಶವಿದೆ. ನೇಯ್ಗೆಯ ಶಾಲೆಯಲ್ಲಿ ಕೈಮಗ್ಗದ ಕೈಗಾರಿಕೆಯನ್ನು ಅಭಿವೃದ್ಧಿಗೆ ತರುವುದರ ಆವಶ್ಯಕತೆಗೆ ತಕ್ಕಂತೆ ಪಾಠಕ್ರಮವನ್ನು ಏರ್ಪಡಿಸಲಾಗುವುದು. ಶಾಸ್ತ್ರೀಯ ವಿಚಾರಗಳಲ್ಲಿಯೂ ನೇಯ್ಗೆಯ ಕೆಲಸದಲ್ಲಿಯೂ, ಎರಡರಲ್ಲಿಯೂ ತಕ್ಕ ಪರಿಶ್ರಮ ಉಂಟಾಗುವಂತೆ ಮಾಡಲಾಗುವುದು. ಮುಖ್ಯವಾಗಿ ನೇಯ್ಗೆಯ ಕೆಲಸ, ನೇಯ್ಗೆಗೆ ನೂಲನ್ನು ಸಿದ್ಧಮಾಡುವುದು, ಬಣ್ಣಹಾಕುವುದು, ನೂಲಿನ ಮಷ್ಟು ಬಣ್ಣವನ್ನು ತೆಗೆದು ಶುಭ್ರಮಾಡುವುದು, ಚೀಟಿ ಬಟ್ಟೆಗಳನ್ನು ತಯಾರಿಸುವುದು, ಇವುಗಳಲ್ಲಿ ತಕ್ಕಷ್ಟು ಪರಿಶ್ರಮವನ್ನುಂಟುಮಾಡಿಕೊಟ್ಟು ಕೈಮಗ್ಗದ ಕೈಗಾರಿಕೆ ವೃದ್ಧಿಹೊಂದುವುದಕ್ಕೆ ಈ ಮೂಲಕ ಅನುಕೂಲಪಡಿಸಿಕೊಡಲಾಗುವುದು. ಈ ಸಂಬಂಧದಲ್ಲಿ ಒಂದು ವಸ್ತುಸಂಗ್ರಹ ಶಾಲೆ, ನೇದ ವಸ್ತುಗಳ ಪ್ರದರ್ಶನಶಾಲೆ, ಇವುಗಳನ್ನು ಹಣದ ಅನುಕೂಲವೊದಗಿದಂತೆಲ್ಲಾ ಏರ್ಪಡಿಸಬೇಕೆಂದು ಉದ್ದೇಶಿಸಲಾಗಿದೆ.

ಸಾಧ್ಯವಾದರೆ, ಜನರು ಕೇಳತಕ್ಕ ವಿಚಾರಗಳನ್ನು ತಿಳಿಸಿ ಸಹಾಯಮಾಡಲು, ಒಂದು 'ಇನ್‌ಫರ್‌ಮೇಷನ್ ಬಿರೊ' ಎಂಬ ಸಂಸ್ಥೆಯನ್ನು ಏರ್ಪಡಿಸುವ ಯೋಚನೆಯೂ ಇದೆ." ಎಂಬುದಾಗಿ ತಿಳಿಯಪಡಿಸಿದರು.

ಮಾರ್ಚಿ ೧೫ನೆಯ ತಾರೀಖಿನ ದಿನ ಪ್ರಾತಃಕಾಲ ಶ್ರೀಮನ್ಮಹಾರಾಜರವರು ಬೆಂಗಳೂರಿಗೆ ಪಶ್ಚಿಮದಲ್ಲಿ ೨೩ಮೈಲಿ ದೂರದಲ್ಲಿರುವ ತಿಪ್ಪಗೊಂಡನಹಳ್ಳಿ ಜಲಾಶಯದ*[೧] ಧಾರಾ ಪ್ರವಾಹೋತ್ಸವವನ್ನು ತಮ್ಮ ಅಮೃತಹಸ್ತದಿಂದ ನೆರವೇರಿಸಿದರು. ಈ ಸಂದರ್ಭದಲ್ಲಿ ಅವರು ಮೈಸೂರು ಇಂಜಿನಿಯರುಗಳ ಸಾಹಸವನ್ನೂ ಉತ್ಸಾಹವನ್ನೂ ಕೊಂಡಾಡಿ, "ಈ ಜಲಾಶಯದ ರಚನೆ ಆರಂಭದಿಂದ ಅಂತ್ಯದವರೆಗೂ ನಮ್ಮ ಮೈಸೂರು ಇಂಜಿನಿಯರುಗಳಿಂದಲೇ ನಡೆದು ಪೂರಯಿಸಿರುವುದು ನಮ್ಮೆಲ್ಲರಿಗೂ ಹೆಮ್ಮೆಯ ಸಂಗತಿ. ಇದರಲ್ಲಿ ಶೇಖರಿಸಲ್ಪಡುತ್ತಿರುವುದು ಮೈಸೂರು ಜಲ; ಈ ಜಲಾಶಯವನ್ನು ಸೃಷ್ಟಿಸಿದುದು ಮೈಸೂರು ಬುದ್ಧಿ; ಜಲವನ್ನು ವಾಹಿನಿಯಾಗಿ ಒಯ್ಯುವುದು ಮೈಸೂರು ವಿದ್ಯುಚ್ಛಕ್ತಿ; ಅವಕ್ಕೆ ಉಪಯೋಗಿಸಲ್ಪಡುತ್ತಿರುವ ಕೊಳವೆಗಳು ಮೈಸೂರಿನವು. ಮೊದಲಿನಿಂದ ಕೊನೆಯವರೆಗೂ ಎಲ್ಲಾ ಮೈಸೂರೇ! ಈ ಜಲಾಶಯವು ಮೈಸೂರಿನ ನಿರ್ಮಾಣ ಶಕ್ತಿಯ ಅದ್ವಿತೀಯ ನಿದರ್ಶನ." ಎಂದು ಅಪ್ಪಣೆ ಕೊಡಿಸಿ, ತಮಗಿರುವ ದೇಶಾಭಿಮಾನ ಮತ್ತು ಪ್ರಜಾವಾತ್ಸಲ್ಯವನ್ನು ಪ್ರಕಾಶಪಡಿಸಿದರು.

ಶ್ರೀಮನ್ಮಹಾರಾಜರವರು ತಿಪ್ಪಗೊಂಡನಹಳ್ಳಿ ಜಲಾಶಯದ ಪ್ರಾರಂಭೋತ್ಸವವನ್ನು ನೆರವೇರಿಸಿದ ದಿನ ಸಾಯಂಕಾಲವೇ ಪೌರಸಭೆಯ ಕಟ್ಟಡದ ಶಂಕುಸ್ಥಾಪನೆಯನ್ನು ಮಾಡಿದರು. ಈ ಸಮಯದಲ್ಲಿ ಪೌರಸಭೆಯ ಅಧ್ಯಕ್ಷರಾದ ಶ್ರೀಯುತ ರಾವ್ ಬಹದ್ದೂರ್ ಬಿ.ಕೆ. ಗರುಡಾಚಾರ್ಯರು ಪೌರಸಭೆಯ ಪರವಾಗಿ ಬಿನ್ನವತ್ತಳೆಯನ್ನು ಅರ್ಪಿಸಿ, ಅದರಲ್ಲಿ ಮಹಾಸ್ವಾಮಿಯವರ ಅಮೃತ ಹಸ್ತದಿಂದ ಪ್ರತಿಷ್ಠಾಪಿತವಾಗುವ ಈ ಪೌರ ಸಭಾಮಂದಿರವು ಮ್ಯುನಿಸಿಪಲ್ ಸ್ವರಾಜ್ಯದ ಸಂಪೂರ್ಣ ಕೇಂದ್ರಸ್ಥಾನವಾಗಿ ಪರಿಣಮಿಸುವಂತೆ ಆಶೀರ್ವದಿಸಬೇಕೆಂದು ಅವರನ್ನು ಕೇಳಿಕೊಂಡರು.

ಶ್ರೀಮನ್ಮಹಾರಾಜರವರು ಶಂಕುಸ್ಥಾಪನೆಯ ಕಾಲದಲ್ಲಿ ಬೆಂಗಳೂರು ನಗರದ ವಿಚಾರವನ್ನೆತ್ತಿ, "ಶ್ರೀಕೆಂಪೇಗೌಡನು ಈ ನಗರವನ್ನು ಪ್ರತಿಷ್ಠಿಸಿದನು. ಆಗಿನಿಂದಲೂ ದಿನದಿನಕ್ಕೂ ವರ್ಷವರ್ಷಕ್ಕೂ ಈ ನಗರವು*[೨] ಅಭಿವೃದ್ಧಿಯನ್ನು ಹೊಂದುತ್ತಿದೆ. ಈಗ ನಮ್ಮ ಇಂಡಿಯದಲ್ಲಿ ವಿಸ್ತೀರ್ಣದಲ್ಲಿ ಇದು ಒಂಬತ್ತನೆಯ ಸ್ಥಾನವನ್ನು ಪಡೆದಿದೆ. ಅಹಮದಾಬಾದನ್ನು ಬಿಟ್ಟರೆ. ಇದೇ ದೊಡ್ಡನಗರ. ಲಕ್ನೋ, ಅಮೃತಸರ ಮತ್ತು ಕರಾಚಿ

---

೧)* ಈ ಜಲಾಶಯಕ್ಕೆ ಚಾಮರಾಜಸಾಗರವೆಂದು ನಾಮಕರಣಮಾಡಿರುವರು. ಇಲ್ಲಿ ಅರ್ಕಾವತೀ ನದಿಗೆ ಅಡ್ಡವಾಗಿ ಅಣೆಕಟ್ಟನ್ನು ಕಟ್ಟಿ, ಬೆಂಗಳೂರಿಗೆ ಕುಡಿಯುವ ನೀರನ್ನು ಒದಗಿಸಿದ್ದಾರೆ. ಒಟ್ಟಿಗೆ ನಾಲ್ಕು ವರ್ಷಗಳು ಮಳೆಯೇ ಬಾರದೆ ಹೋದರೂ ಈ ಜಲಾಶಯವು ಲಕ್ಷ ಪ್ರಜೆಗಳಿಗೆ ನೀರನ್ನು ಒದಗಿಸುವ ಶಕ್ತಿಯುಳ್ಳುದಾಗಿದೆ.

---

೨)*ಬೆಂಗಳೂರು ನಗರವು ೧೨ ಚದರ ಮೈಲಿಗಳು ವಿಸ್ತೀರ್ಣ ಉಳ್ಳುದಾಗಿಯೂ ಎರಡುಲಕ್ಷ ಪ್ರಜಾಸಂಖ್ಯೆ ಉಳ್ಳುದಾಗಿಯೂ ಇದೆ.

ಇವುಗಳು ಬೆಂಗಳೂರಿನ ಅನಂತರ ಶ್ರೇಣಿಯಲ್ಲಿ ಬರತಕ್ಕವು. ಬೆಂಗಳೂರು ನಗರವನ್ನು ಇಂಡಿಯದ ಹೊರಗಿನ ನಗರಗಳೊಂದಿಗೆ ಹೋಲಿಸಿದರೆ, ಕೇಪ್‌ಟೌನ್ ಮತ್ತು ಕೊಲಂಬೋ ಮುಂತಾದ ಪ್ರಮುಖ ರೇವುಪಟ್ಟಣಗಳೊಂದಿಗೂ ಫ್ಲಾರೆನ್ಸ್ ಮತ್ತು ಟಹರಾನ್ ಮುಂತಾದ ಇತಿಹಾಸ ಪ್ರಸಿದ್ಧವಾದ ನಗರಗಳೊಂದಿಗೂ ಹೋಲಿಸಬಹುದು. ನಮ್ಮ ಬೆಂಗಳೂರು ನಗರವು ಈಗಿನ ಪ್ರಪಂಚದ ಅತ್ಯಂತ ಮುಂದುವರಿದ ನವನಾಗರಿಕ ನಗರಗಳೊಂದಿಗೆ ಸರಿಸಮನಾಗಿ ನಿಲ್ಲುವುದು," ಎಂದು ಹೇಳಿ, ಬೆಂಗಳೂರು ನಗರವನ್ನು ನಮ್ಮ ಭರತಭೂಮಿಯಲ್ಲಿ ಅತ್ಯಂತ ಸುಂದರವಾದ ನಗರಗಳಲ್ಲಿ ಪ್ರಮುಖವಾದುದನ್ನಾಗಿ ಮಾಡಬೇಕೆಂಬ ಅಭಿಮಾನವು ತಮ್ಮಲ್ಲಿ ಎಷ್ಟರಮಟ್ಟಿಗಿರುವುದೆಂಬುದನ್ನು ವ್ಯಕ್ತಗೊಳಿಸಿದರು.

ಬೆಂಗಳೂರು ನಗರಭವನದ ಶಂಕುಸ್ಥಾಪನೆಯಾದ ತರುವಾಯ ಶ್ರೀಮನ್ಮಹಾರಾಜರವರು ರಾಜಮರ್ಯಾದೆಗಳೊಂದಿಗೆ ಶ್ರೀನರಸಿಂಹರಾಜರಸ್ತೆ, ಮಾರ್ಕೆಟ್ ಚೌಕ, ದೊಡ್ಡಪೇಟೆ, ಅವೆನ್ಯೂರಸ್ತೆ ಇವೇ ಮೊದಲಾದ ಮುಖ್ಯಬೀದಿಗಳಲ್ಲಿ ಬಿಜಯಮಾಡಿದರು. ದಾರಿಯುದ್ದಕ್ಕೂ ಮಂಟಪಗಳೂ, ತಳಿರುತೋರಣಗಳೂ, ಧ್ವಜಪತಾಕೆಗಳೂ ಶೋಭಾಯಮಾನವಾಗಿದ್ದವು. ರಸ್ತೆಗಳ ಎರಡು ಕಡೆಗಳಲ್ಲೂ ಪ್ರಜೆಗಳು ಕಿಕ್ಕಿರಿಯುವಂತೆ ನೆರೆದಿದ್ದು, ಮಹಾಸ್ವಾಮಿಯವರ ದರ್ಶನದಿಂದ ತಮಗುಂಟಾದ ಆನಂದಾತಿಶಯವನ್ನು ವ್ಯಕ್ತಪಡಿಸಿದರು. ಇಂತಹ ಉತ್ಸವ ಪರಂಪರೆಗಳು ವೈಖರಿಯಿಂದ ನಡೆದು ಆಳುವ ಮಹಾಸ್ವಾಮಿಯವರ ದರ್ಶನವೂ ಅವರ ಭಾಷಣಗಳನ್ನು ಕೇಳುವ ಸುಯೋಗವೂ ಇಲ್ಲಿನ ಪ್ರಜೆಗಳಿಗೆ ದೊರೆತುದು ಬೆಂಗಳೂರಿನ ಭಾಗ್ಯವೆಂದು ಧಾರಾಳವಾಗಿ ಹೇಳಬಹುದು.

# ೧೧. ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರು

ಮೈಸೂರು ಸಂಸ್ಥಾನದ ಚರಿತ್ರೆಯಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರ ಹೆಸರು ಎಷ್ಟುಪವಿತ್ರವೂ ಪ್ರಾಮುಖ್ಯವೂ ಆಗಿರುವುದೋ, ಅವರ ಧರ್ಮಪತ್ನಿಯವರಾದ ಶ್ರೀವಾಣಿವಿಲಾಸ ಸನ್ನಿಧಾನದವರ ಹೆಸರೂ ಅಷ್ಟೇ ಪವಿತ್ರವೂ ಪ್ರಾಮುಖ್ಯವೂ ಆಗಿದೆ. ಶ್ರೀಚಾಮರಾಜೇಂದ್ರ ಒಡೆಯುರವರು ಮೈಸೂರು ಸಂಸ್ಥಾನದ ಪ್ರಜೆಗಳನ್ನು ಹದಿಮೂರುವರ್ಷಗಳಕಾಲ ಪರಿಪಾಲನೆಮಾಡಿ, ರಾಜ್ಯಭಾರ ನಡೆಯಿಸಿದಂತೆಯೇ ಶ್ರೀವಾಣೀವಿಲಾಸ ಸನ್ನಿಧಾನದವರೂ ಎಂಟುವರ್ಷಗಳ ಕಾಲ ಮೈಸೂರು ಪ್ರಜೆಗಳನ್ನು ಪುತ್ರವಾತ್ಸಲ್ಯದಿಂದ ಪಾಲಿಸಿ, ರಾಜ್ಯಭಾರವನ್ನು ಯಶಸ್ವಿಯಾದ ರೀತಿಯಲ್ಲಿ ನಿರ್ವಹಿಸಿರುವರು. ಇವರ ಜೀವನಚರಿತ್ರೆಯೂ, ರಾಜ್ಯದಾಡಳಿತರೀತಿಯೂ, ಇವರ ಪುತ್ರರಾದ ಆಳುವ ಮಹಾಸ್ವಾಮಿಯವರ ಜೀವನ ಚರಿತ್ರೆಯಲ್ಲಿ ಮಿಳಿತವಾಗಿರುವುದ ರಿಂದಲೂ, ಮಹಾಮಾತೃಶ್ರೀಯವರ ಜೀವನಚರಿತ್ರೆಯು ಭಾರತ ರಮಣಿಯರಿಗೆ ಆದರ್ಶಪ್ರಾಯವಾಗಿರುವುದರಿಂದಲೂ, ಅದನ್ನು ಇಲ್ಲಿ ಸಂಗ್ರಹ ರೂಪವಾಗಿ ಕೊಟ್ಟಿದೆ.

ಮುಮ್ಮಡಿ ಕೃಷ್ಣರಾಜ ಒಡೆಯರವರ ಆಶ್ರಿತ ಕುಟುಂಬಿಗಳಲ್ಲಿ ನರಸೇ ಅರಸರು ಒಬ್ಬರು. ಇವರು ಕಳಲೆ ಮನೆತನಕ್ಕೆ ಸೇರಿದವರು. ಇವರ ಧರ್ಮಪತ್ನಿಯವರ ಹೆಸರು ಕೆಂಪನಂಜಮ್ಮಣ್ಣಿಯವರು. ಇವರ ಗರ್ಭದಲ್ಲಿ ೧೮೬೬ರಲ್ಲಿ ಜನಿಸಿದ ಪುತ್ರೀರತ್ನವೇ ನಮ್ಮ ಮಹಾಮಾತೃಶ್ರೀಯವರು. ಇವರಿಗೂ ಕೆಂಪನಂಜಮ್ಮಣ್ಣಿಯವರೆಂಬ ಹೆಸರನ್ನೇ ಇಟ್ಟರು. ಮುಮ್ಮಡಿ ಕೃಷ್ಣರಾಜ ಒಡೆಯರವರಿಂದ ಮೈಸೂರನ್ನು ಸಮಾಧಾನಸ್ಥಿತಿಗೆ ತರಲು ಇಂಗ್ಲಿಷರು ೧೮೩೧ರಲ್ಲಿ ತೆಗೆದುಕೊಂಡಿದ್ದವರು, ೧೮೬೭ರಲ್ಲಿ ಅದನ್ನು ಪುನಃ ಮೈಸೂರು ರಾಜಮನೆತನದವರಿಗೆ ಕೊಡಬೇಕೆಂಬ ನಿರ್ಣಯವನ್ನು ಸೀಮೆಯಲ್ಲಿ ಮಾಡಿದರು. ಅದೇ ವರ್ಷದಲ್ಲೇ ಕೆಂಪನಂಜಮ್ಮಣ್ಣಿಯವರ ಜನನವಾದುದರಿಂದ ಇವರ ಜನ್ಮಧಾರಣೆಯೊಂದಿಗೆ ಮೈಸೂರಿನ ಸ್ವಾತಂತ್ರ್ಯವೂ ಪ್ರಾರಂಭವಾಯಿತೆನ್ನಬಹುದು.

ಕೆಂಪನಂಜಮ್ಮಣ್ಣಿಯವರಿಗೆ ಐದುವರ್ಷಗಳು ತುಂಬುತ್ತಲೇ ನರಸೇ ಅರಸುರವರು ಯೋಗ್ಯರಾದ ಒಬ್ಬ ಉಪಾಧ್ಯಾಯರನ್ನು ನೇಮಿಸಿ ಓದುಬರೆಹಗಳನ್ನು ಕಲಿಸಿದರು. ಇವರಿಗೆ ಬುದ್ಧಿಯು ಬಾಲ್ಯದಲ್ಲೇ ಅತಿ ಚುರುಕಾಗಿದ್ದುದರಿಂದ, ಹೇಳಿಕೊಟ್ಟುದನ್ನೆಲ್ಲಾ ಬಹುಬೇಗ ಗ್ರಹಿಸುತ್ತಿದ್ದರು. ಇವರು ರಾಮಾಯಣ, ಭಾರತ, ಭಾಗವತ ಮೊದಲಾದ ಪುರಾಣಗಳನ್ನು ಓದಿ, ಸೀತೆ, ದ್ರೌಪದಿ, ಸಾವಿತ್ರಿ, ಅಹಲ್ಯೆ ಮೊದಲಾದ ಪತಿವ್ರತಾ ಶಿರೋಮಣಿಯರ ಜೀವನಚರಿತ್ರೆಗಳನ್ನು ಮನನಮಾಡಿಕೊಂಡಿದ್ದರು.

ಚಿಕ್ಕಂದಿನಿಂದಲೂ ಇವರು ತೋರಿಸಿದ ದೈವಭಕ್ತಿಯೂ, ದಯಾಳುತ್ವವೂ, ಔದಾರ್ಯವೂ, ಸಕಲರಿಗೂ ಸಂತೋಷವನ್ನುಂಟುಮಾಡಿದವು. ಇವರ ಸೌಶೀಲ್ಯವನ್ನೂ ದಯಾಳುತ್ವವನ್ನೂ ನೋಡಿ ನೆಂಟರಿಷ್ಟರೆಲ್ಲರೂ ಆಶ್ಚರ್ಯಪಡುತ್ತಿದ್ದರು. ಹೀಗೆ ಅಭಿವೃದ್ಧಿಗೆ ಬರುತ್ತಿದ್ದ ಕೆಂಪನಂಜಮ್ಮಣ್ಣಿಯವರಿಗೆ ಹನ್ನೆರಡುವರ್ಷ ವಯಸ್ಸಾಗಲು, ಇವರ

ತಾಯಿತಂದೆಗಳು ಅನುರೂಪನಾದ ವರನನ್ನು ಹುಡುಕುವ ಪ್ರಯತ್ನ ಮಾಡಿದರು. ಇವರಿಗೂ ರಾಜ ಮನೆತನದವರಿಗೂ ಪರಿಚಯವಾದ ಅನಂತರ ರಾಜ್ಞಿ ಪದವಿಗೆ ತಕ್ಕ ವಿದ್ಯೆ, ಬುದ್ಧಿ, ಸುನೀತಿಗಳಿಂದ ಶೋಭಿಸುತ್ತಿದ್ದ ಕೆಂಪನಂಜಮ್ಮಣ್ಣಿಯವರನ್ನು ಶ್ರೀಚಾಮರಾಜೇಂದ್ರ ಒಡೆಯರವರಿಗೇ ತಂದುಕೊಂಡು ವಿವಾಹ ಬೆಳಸಬೇಕೆಂಬುದಾಗಿ ಸೀತಾವಿಲಾಸದ ಮಹಾರಾಜ್ಞಿಯವರು ನಿರ್ಧರಿಸಿದರು. 79/68

ಈ ಕಾಲದಲ್ಲಿ ಮೈಸೂರಿನಲ್ಲಿ ವೀರಕ್ಷಾಮ ; ಅರಮನೆಗೂ ಸಾಲದ ಹೊರೆ ಬಹಳವಾಗಿತ್ತು. ಮಹಾಕ್ಷೋಭೆಯಿಂದ ಜನರು ಹಾಹಾಕಾರಪಡುತ್ತಿದ್ದರು. ಹೀಗಿದ್ದರೂ ಅರಮನೆಯಲ್ಲಿ ಮದುವೆ ಪ್ರಯತ್ನ ನಡೆದು, ೧೮೭೮ನೆಯ ಇಸವಿ ಮೇ ತಿಂಗಳಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರಿಗೂ ಕೆಂಪನಂಜಮ್ಮಣ್ಣಿಯವರಿಗೂ ವಿವಾಹ ಮಹೋತ್ಸವವು ನಡೆಯಿತು. ಈ ವಿವಾಹವು ನಡೆದಕೂಡಲೆ ಮೈಸೂರಿನಲ್ಲಿ ವಿಶೇಷ ಮಳೆಯಾಗಿ ಪ್ರಜೆಗಳಿಗೆ ಸ್ವಲ್ಪಮಟ್ಟಿಗೆ ಕ್ಷೇಮವಾಯಿತು.

ವಿವಾಹವಾದಂದಿನಿಂದ ಮಹಾರಾಣಿಯವರು ತಮ್ಮ ಪತಿಸೇವೆಯನ್ನು ಮಾಡುತ್ತಾ ಅವರ ಸಹಧರ್ಮಿಣಿಯರಾಗಿಯೂ, ಸಹಚಾರಿಣಿಯರಾಗಿಯೂ, ಇದ್ದರು. ೧೮೮೧ರಲ್ಲಿ ಮೈಸೂರು ದೇಶವು ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಹಿಂದಕ್ಕೆ ಬಂದಿತು. ೧೮೮೪ನೆಯ ಜೂನ್ ತಿಂಗಳಲ್ಲಿ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರೂ, ೧೮೮೮ರಲ್ಲಿ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ ಇವರ ಗರ್ಭಸುಧಾಂಬುಧಿಯಲ್ಲಿ ಜನಿಸಿದರು.

ಶ್ರೀ ಚಾಮರಾಜೇಂದ್ರ ಒಡೆಯರವರು ೧೮೯೪ನೆಯ ಡಿಸೆಂಬರ್ ತಿಂಗಳಲ್ಲಿ ಕಲ್ಕತ್ತೆಗೆ ಹೋಗಿದ್ದಾಗ, ಕಂಠನಾಳರೋಗವು ಪ್ರಾಪ್ತವಾಗಿ ವಿಧಿವಶರಾದರು. ಆಗ ಶ್ರೀವಾಣೀವಿಲಾಸ ಸನ್ನಿಧಾನದವರಿಗೆ ಇನ್ನೂ ೨೭ವರ್ಷ ಮಾತ್ರ ವಯಸ್ಸು. ರಾಜಭೋಗದಲ್ಲಿದ್ದ ಇವರಿಗೆ ಅಪಾರವಾದ ಕಷ್ಟವೂ ನಷ್ಟವೂ ಪ್ರಾಪ್ತವಾಗಿ, ಮಹಾಸಂಕಟಕ್ಕೆ ಈಡಾದರು. ಈ ಸಂದರ್ಭದಲ್ಲಿ ಶ್ರೀಮನ್ಮಹಾರಾಣಿಯವರು ತೋರಿಸಿದ ಮನಸ್ಥೈರ್ಯವೂ, ಧೈರ್ಯವೂ ಅತ್ಯಂತ ಪ್ರಶಂಸನೀಯವಾದುವು.

ಕಲ್ಕತ್ತೆಯಲ್ಲಿಯೇ ಶವಸಂಸ್ಕಾರವು ನಡೆಯಿತು. ದಹನ ಸಂಚಯನಾದಿ ಕರ್ಮಗಳೆಲ್ಲಾ ಶಾಸ್ತ್ರೋಕ್ತವಾಗಿ ನಡೆದ ತರುವಾಯ, ಮಹಾರಾಣಿಯವರು ತಮ್ಮ ಇಬ್ಬರು ಗಂಡುಮಕ್ಕಳು, ಮೂವರು ಹೆಣ್ಣುಮಕ್ಕಳೊಡನೆ ಮೈಸೂರಿಗೆ ಬಂದು ಸೇರಿದರು. ಸಂಸ್ಥಾನದ ಪ್ರಜಾಸಮುದಾಯ ಮಾತ್ರವಲ್ಲ; ಭಾರತವರ್ಷವೇ ಶೋಕಸಾಗರದಲ್ಲಿ ಮುಳುಗಿತು.

ಶ್ರೀಕೃಷ್ಣರಾಜೇಂದ್ರ ಒಡೆಯರವರು ಪ್ರಾಪ್ತವಯಸ್ಕರಾಗುವವರೆಗೆ ರಾಜ್ಯಾಡಳಿತವನ್ನು ನಿರ್ವಹಿಸಲು, ಶ್ರೀವಾಣೀವಿಲಾಸ ಸನ್ನಿಧಾನದವರೇ ರೀಜಂಟರಾಗಿ ನೇಮಿಸಲ್ಪಟ್ಟರು. ಇವರ ಸಹಾಯಕ್ಕಾಗಿ ಒಂದು ಮಂತ್ರಾಲೋಚನಾ ಸಭೆ ಏರ್ಪಾಡಾಯಿತು. ಶ್ರೀಯುತ ಸರ್. ಕೆ. ಶೇಷಾದ್ರಿ ಅಯ್ಯರ್ ಅವರು ದಿವಾನರಾಗಿದ್ದರು. ಇವರ ಸಹಾಯ ಸಲಹೆಗಳಿಂದಲೂ, ರೆಸಿಡೆಂಟರ ಮೇಲ್ವಿಚಾರಣೆಯಿಂದಲೂ, ಮಹಾರಾಣಿಯವರು

ತಮಗಿದ್ದ ಸ್ವಭಾವವಾದ ಧೈರ್ಯ, ಸ್ಥೈರ್ಯಗಳಿಂದಲೂ ರಾಜ್ಯಸೂತ್ರವನ್ನು ತಾವೇ ಹಿಡಿದು ಅವಿಚ್ಛಿನ್ನವಾಗಿ ಎಂಟುವರ್ಷಗಳಕಾಲ ರಾಜ್ಯಭಾರ ನಡೆಯಿಸಿದರು. ಇವರ ಕಾಲದಲ್ಲಿ ಕಾವೇರಿ ವಿದ್ಯುಚ್ಛಕ್ತಿಯ ನಿರ್ಮಾಣದ ಏರ್ಪಾಡೂ, ಮಾರೀಕಣಿವೆಯ ಅಣೆಕಟ್ಟೂ, ಮೈಸೂರಿನ ಹೊಸ ಅರಮನೆಯ ನಿರ್ಮಾಣವೂ, ಮೈಸೂರು ನಗರದ ವಿಶೇಷವಿಭಾಗ ವಿಸ್ತಾರಗಳೂ ನಡೆದವು. ಬೆಂಗಳೂರಿನಲ್ಲಿ ನಲ್ಲಿಗಳ ಮೂಲಕ ನೀರು ಒದಗಿಸುವ ಏರ್ಪಾಡೂ ಇವರ ಕಾಲದಲ್ಲಿಯೇ ನಡೆಯಿತು. ಬೆಂಗಳೂರಿನಲ್ಲಿರುವ ವಿಕ್ಟೋರಿಯಾ ಆಸ್ಪತ್ರೆಯ ಶಂಕುಸ್ಥಾಪನೆಯನ್ನು ಮಾಡಿದವರೂ ಇವರೇ. ಇವರು ಹಿಂದುಧರ್ಮದ ಪಾಲನೆಯಲ್ಲಿ ಎಷ್ಟು ಶ್ರದ್ಧೆಯನ್ನು ವಹಿಸಿದ್ದರೋ ಇತರ ಧರ್ಮಗಳಲ್ಲಿಯೂ ಅಷ್ಟೇ ಶ್ರದ್ಧೆಯನ್ನು ವಹಿಸಿದ್ದರು. ಸ್ತ್ರೀವಿದ್ಯಾಭ್ಯಾಸಕ್ಕೂ ಸ್ತ್ರೀಯರ ಉನ್ನತಿಗೂ ನಮ್ಮ ಸಂಸ್ಥಾನದಲ್ಲಿ ತಳಹದಿಯನ್ನು ಹಾಕಿದವರೇ ಇವರು. ಇವರ ಕಾಲದಲ್ಲಿಯೇ ಮೈಸೂರು ಮಹಾರಾಣಿ ಕಾಲೇಜು ಸ್ಥಾಪಿತವಾಯಿತು.

೧೯೦೨ನೆಯ ಆಗಸ್ಟ್ ತಿಂಗಳಲ್ಲಿ ಲಾರ್ಡ್ ಕರ್ಜನ್ ಅವರು ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರಿಗೆ ರಾಜ್ಯಾಧಿಕಾರವನ್ನು ವಹಿಸಿದ ಕಾಲದಲ್ಲಿ, ಅದುವರೆಗೆ ರೀಜಂಟರಾಗಿದ್ದ ಶ್ರೀವಾಣೀವಿಲಾಸ ಸನ್ನಿಧಾನದವರ ಶಕ್ತಿ, ಸೌಜನ್ಯ, ಸಾಮರ್ಥ್ಯಾದಿಗಳನ್ನು ಕೊಂಡಾಡಿ, ಸಾರ್ವಭೌಮ ಸರಕಾರದವರು ಅವರಿಗೆ ಸಿ. ಐ. ಎಂಬ ಬಿರುದನ್ನೂ, ಜೀವಾವಧಿ ೧೯ ತೋಪುಗಳ ಮರ್ಯಾದೆಯನ್ನೂ ಅನುಗ್ರಹಿಸಿರುವುದಾಗಿ ತಿಳಿಸಿದರು.

ಶ್ರೀಕೃಷ್ಣರಾಜ ಒಡೆಯರವರಿಗೆ ರಾಜ್ಯಸೂತ್ರವನ್ನು ವಹಿಸಿಕೊಟ್ಟು, ರೀಜನ್‌ಸಿ ಪದವಿಯಿಂದ ನಿವೃತ್ತರಾದಮೇಲೂ ತಾವು ಜೀವಿಸಿದ್ದ ೩೨ವರ್ಷಗಳೂ ತಮ್ಮ ಮಕ್ಕಳಿಗೆ ಅನೇಕ ಧರ್ಮಸೂಕ್ಷ್ಮಗಳನ್ನೂ ಪೂರ್ವಾಚಾರ ಪದ್ಧತಿಗಳನ್ನೂ ಬೋಧಿಸುತ್ತಲೇ ಇದ್ದರು. ಇವರ ದೇಹಸ್ಥಿತಿ ಕ್ರಮೇಣ ಹೀನಸ್ಥಿತಿಗೆ ಬಂದು, ಇದ್ದಕ್ಕಿದ್ದ ಹಾಗೆಯೇ ಉಲ್ಬಣಾವಸ್ಥೆಯನ್ನು ಹೊಂದಿ, ೧೯೩೪ನೆಯ ಜುಲೈ ೭ನೆಯ ತಾರೀಖು ಶನಿವಾರ ಮಧ್ಯರಾತ್ರಿ ಇವರು ಕಳೇಬರವನ್ನು ಬಿಟ್ಟರು. ಇವರಿಗೆ ಸಾಯುವಾಗ್ಗೆ ೬೯ ವರ್ಷ ವಯಸ್ಸು. ಇವರ ಮರಣದಿಂದ ಮೈಸೂರು ದೇಶದ ಪ್ರಜೆಗಳು ಮಾತ್ರವಲ್ಲದೆ ಭರತಖಂಡದ ಸಮಸ್ತ ಜನರೂ ವ್ಯಥೆಪಟ್ಟರು. ಸಂಸ್ಥಾನದ ಎಲ್ಲಾ ಕಡೆಗಳಲ್ಲಿಯೂ ಪ್ರಜೆಗಳು ಸಭೆ ಸೇರಿ, ತಮಗುಂಟಾದ ದುಃಖನ್ನು ಪ್ರದರ್ಶಿಸಿ ಶ್ರೀಮನ್ಮಹಾರಾಜರವರಿಗೂ, ಶ್ರೀಮದ್ಯುವರಾಜರವರಿಗೂ, ರಾಜಬಂಧು ಗಳಿಗೂ, ಒದಗಿರುವ ದುಃಖದಲ್ಲಿ ಭಾಗಿಗಳಾಗಿ, ಈ ದುಃಖವನ್ನು ಸಹಿಸಲು ಅವರಿಗೆ ಶಕ್ತಿಯನ್ನೂ, ಮಹಾಮಾತೃಶ್ರೀಯವರ ಆತ್ಮಕ್ಕೆ ಶಾಂತಿಯನ್ನೂ ಕರುಣಿಸಬೇಕೆಂದು ಜಗದೀಶ್ವರನನ್ನು ಪ್ರಾರ್ಥಿಸಿದರು.

ಈ ಸಂದರ್ಭದಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಪ್ರಚಂಡ ಸಭೆಗಳು ಸೇರಿದ್ದವು. ಬೆಂಗಳೂರಿನ ಸಭೆಯ ಅಧ್ಯಕ್ಷತೆಯನ್ನು ಶ್ರೀಯುತ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರವರು ವಹಿಸಿದ್ದರು. ಈ ಸಭೆಯಲ್ಲಿ ಪ್ರಥಮ ಭಾಷಣಕಾರರಾದ ಶ್ರೀಯುತ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರವರು ದಿವಂಗತ ಶ್ರೀವಾಣೀವಿಲಾಸ

ಸನ್ನಿಧಾನದವರ ವಿಚಾರವಾಗಿ ಮಾತನಾಡುತ್ತಾ, "ಮೈಸೂರಿನ ಇತಿಹಾಸದಲ್ಲಿ ಮೂರು ನಾರೀರತ್ನಗಳು ದೇಶದ ಹಿತಕ್ಕಾಗಿ ಅಸ್ಪಾದೃಶವಾದ ಕೆಲಸ ಮಾಡಿರುವರು. ಇವರಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರವರ ಮಹಿಷಿಯಾದ ಮಹಾರಾಣಿ ಲಕ್ಷಮ್ಮಣ್ಣಿಯವರು, ಮೈಸೂರು ರಾಜ್ಯವು ಕೈತಪ್ಪಿ ಪರರಕೈಲಿ ಸಿಕ್ಕಿಬಿದ್ದಾಗ್ಗೆ ಬ್ರಿಟಿಷ್ ಸರಕಾರದವರ ಸಹಾಯವನ್ನು ಹೊಂದಿ ಪುನಃ ರಾಜ್ಯವನ್ನು ಹಿಂದಕ್ಕೆ ಪಡೆಯಲು ಸಾಕಾದಷ್ಟು ಪ್ರಯತ್ನಪಟ್ಟು ಕೊನೆಗೆ ಜಯಶೀಲರಾಗಿರುವುದನ್ನು ಸುವರ್ಣಾಕ್ಷರದಲ್ಲಿ ಬರೆದಿಡಬೇಕೆಂದು ಹೇಳಬಹುದು. ಎರಡನೆಯ ನಾರೀರತ್ನವೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರವರ ಪತ್ನಿ ಸೀತಾ ವಿಲಾಸ ಸನ್ನಿಧಾನದವರು. ಬ್ರಿಟಿಷ್ ಸರಕಾರದವರು ಪುನಃ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ರಾಜ್ಯವನ್ನು ಕೊಟ್ಟಾಗ್ಗೆ ಅವರಿನ್ನೂ ಚಿಕ್ಕವರಾದ್ದರಿಂದ ಅವರಿಗೆ ಬುದ್ಧಿಯನ್ನು ಹೇಳುತ್ತಾ ಅನೇಕ ವಿಷಯಗಳಲ್ಲಿ ಅವರಿಗೆ ಈಕೆ ಉಪದೇಶ ಮಾಡುತ್ತಿದ್ದರು. ಮೂರನೆಯ ನಾರೀರತ್ನವೆಂದರೆ ಈಗ ಪರಂಧಾಮವನ್ನೈದಿದ ವಾಣೀವಿಲಾಸ ಸನ್ನಿಧಾನದವರು. ಇವರು ಕಾರ್ಯದಲ್ಲಿ ಧುರೀಣರು. ವಿದ್ಯಾವಂತರು. ಪ್ರಶಸ್ತಿಯೊಡನೆ ದೇಶಕ್ಕೆ ಕೀರ್ತಿಯನ್ನು ಸಂಪಾದಿಸಿ ಕೊಟ್ಟವರು. ಇವರು ನಮ್ಮ ಶ್ರೀಮನ್ಮಹಾರಾಜರವರಿಗೆ ಮಾತ್ರವಲ್ಲ ; ಮೈಸೂರಿನ ಪ್ರಜೆಗಳಿಗೆಲ್ಲಾ ತಾಯಿಯಾಗಿದ್ದರು. ನಮ್ಮೆಲ್ಲರಿಗೂ ತಾಯಿ ಮರಣಹೊಂದಿದ ವ್ಯಸನವುಂಟಾಗಿದೆ," ಎಂದು ಹೇಳಿದರು.

ಮೈಸೂರು ನಾಗರಿಕರ ಶೋಕಸಭೆಯ ರಂಗಾಚಾರ್ಲು ಮೆಮೋರಿಯಲ್ ಹಾಲಿನ ಆವರಣದಲ್ಲಿ ನಡೆಯಿತು. ಸಂಸ್ಥಾನದ ದಿವಾನ್ ಸಾಹೇಬರವರು ಅಗ್ರಾಸನವನ್ನು ವಹಿಸಿದ್ದರು. ಇವರು, "ಶ್ರೀಮನ್ಮಹಾರಾಣಿಯವರು ಮಹಾ ವ್ಯಕ್ತಿ, ಅವರು ಸರಳ ಜೀವಿಗಳು, ಗಂಭೀರ ಸ್ವಭಾವದವರು, ಸ್ವಾತಂತ್ರ್ಯಾಭಿಮಾನಿಗಳು. ಹೃದಯವೈಶಾಲ್ಯವನ್ನು ಪಡೆದಿದ್ದವರು. ಈ ಎಲ್ಲಾ ಸೌಶೀಲ್ಯಗಳೂ ಒಂದೇ ವ್ಯಕ್ತಿಯಲ್ಲಿರುವುದು ಅಪೂರ್ವ," ಎಂದು ಶ್ರೀವಾಣೀವಿಲಾಸ ಸನ್ನಿಧಾನದವರನ್ನು ಪ್ರಶಂಸಿಸಿದರು.

ಶ್ರೀವಾಣೀವಿಲಾಸ ಸನ್ನಿಧಾನದವರು ದಿವಂಗತರಾದ ದಿನ ಬಹಳ ಪುಣ್ಯದಿನ. ಉತ್ತರಾಯಣದಲ್ಲಿ ಅದರಲ್ಲಿಯೂ ಏಕಾದಶಿಯ ದಿನವೆಂದರೆ ಹಿಂದು ಜನರಿಗೆ ಮಹಾ ಪವಿತ್ರವಾದ ದಿವಸ. ಇಂತಹ ಏಕಾದಶಿಯ ಮಧ್ಯರಾತ್ರಿಯಲ್ಲಿ ಮರಣ ಹೊಂದಿ, ದ್ವಾದಶಿಯ ದಿವಸ ಶ್ಮಶಾನಯಾತ್ರೆಯ ಪುಣ್ಯವು ಲಭಿಸಿದುದು, ಇವರ ಸುಕೃತವನ್ನೂ ಶ್ರೇಷ್ಠತ್ವವನ್ನೂ ವ್ಯಕ್ತಗೊಳಿಸುತ್ತದೆ. ಇವರ ಅಸಾಧಾರಣ ವ್ಯಕ್ತಿತ್ವ, ದಯಾರ್ದ್ರ ಹೃದಯ, ಔದಾರ್ಯ, ಮನೋಭಾವ, ಜಾತಿ ಮತ ಕೋಮುಗಳೆಂಬ ಭಾವನೆಯಿಲ್ಲದೆ ತಮ್ಮ ಪ್ರಜೆಗಳ ಕ್ಷೇಮಚಿಂತನೆ, ಇವೇ ಮೊದಲಾದ ಸದ್ಗುಣಗಳು ಆಳುವ ಮಹಾಸ್ವಾಮಿಯವರಾದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರಲ್ಲಿ ಮೂರ್ತಿಮತ್ತಾಗಿವೆ.

ಶ್ರೀವಾಣೀವಿಲಾಸ ಸನ್ನಿಧಾನದವರು ಬಡವರಾಗಿ ಹುಟ್ಟಿ, ರಾಜಮನೆತನವನ್ನು ಸೇರಿ, ರಾಜ್ಯದ ಭೋಗವೈಭವಗಳನ್ನು ಅನುಭವಿಸಿ ಸರ್ವದಾ ಬಡವರ ಹಿತಚಿಂತನೆಯಲ್ಲಿ ಆಸಕ್ತರಾಗಿದ್ದರು. ಅವರ ಆಳ್ವಿಕೆಯ ಶ್ರೇಷ್ಠತ್ವವೂ, ಅವರ ಗಂಭೀರಮನೋಭಾವವೂ

ಮತ್ತು ಮೈಸೂರು ಸಂಸ್ಥಾನವನ್ನು ಅಭಿವೃದ್ಧಿಗೊಳಿಸಲು ಅವರು ಪಟ್ಟ ಶ್ರಮವೂ, ಮೈಸೂರಿನ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವ ವಿಷಯಗಳಾಗಿವೆ.

ಇಂತಹ ಮಹಾಮಾತೆಯನ್ನು ಹೊಂದಿದ್ದ ಶ್ರೀಮನ್ಮಹಾರಾಜರವರೂ ಮೈಸೂರು ದೇಶದ ಪ್ರಜೆಗಳೂ ಧನ್ಯರು. ಶ್ರೀಮನ್ಮಹಾರಾಜರವರಂತಹ ಪುತ್ರರತ್ನವನ್ನು ಪಡೆದ ಈ ಮಹಾರಾಣಿಯವರೂ ಧನ್ಯರು. ಇವರ ಆತ್ಮಕ್ಕೆ ಜಗದೀಶ್ವರನು ಶಾಂತಿಯನ್ನು ಕರುಣಿಸಲೆಂದು ಸಂಸ್ಥಾನದ ಪ್ರಜೆಗಳೆಲ್ಲರೂ ಮಾಡಿದ ಪ್ರಾರ್ಥನೆ ನಿಸ್ಸಂದೇಹವಾಗಿಯೂ ಸಫಲವಾಗದಿರಲಾರದು.

## ೧೨. ಶ್ರೀವಾಣೀವಿಲಾಸ ಹೆರಿಗೆ ಆಸ್ಪತ್ರೆ

ವೃತ್ತಿ ಶಿಕ್ಷಣ ಮಂದಿರದ ಶಂಕುಸ್ಥಾಪನೆ ನೆರವೇರಿದ ಎರಡು ವರ್ಷಗಳ ತರುವಾಯ, ೧೯೩೫ನೆಯ ಇಸವಿ ಜೂನ್ ೮ನೆಯ ತಾರೀಖು ಬೆಂಗಳೂರು ನಗರದ ಇತಿಹಾಸದಲ್ಲಿ ಅತ್ಯಂತ ಮಹತ್ವಪೂರ್ಣವಾದ ದಿನ. ಅದು ಶ್ರೀಮನ್ಮಹಾರಾಜರವರು ಶ್ರೀವಾಣೀವಿಲಾಸ ಹೆರಿಗೆ ಆಸ್ಪತ್ರೆ ಮತ್ತು ಅದರ ಪಕ್ಕದಲ್ಲಿಯೇ ಕಟ್ಟಿರುವ ಪಾರ್ವತೀಚಂದ್ರಶೇಖರ ಚಿಕಿತ್ಸಾಲಯಗಳ ಪ್ರಾರಂಭೋತ್ಸವವನ್ನು ತಮ್ಮ ಅಮೃತಹಸ್ತದಿಂದ ನೆರವೇರಿಸಿದ ಅಪೂರ್ವ ದಿನ. ಎಲ್ಲಿ ನೋಡಿದರೂ ಉತ್ಸಾಹವೇ ಉತ್ಸಾಹ. ಬೆಂಗಳೂರು ಆದಿನ ನವಚೇತನದಿಂದ ಕೂಡಿತ್ತು. ಶ್ರೀವಾಣೀವಿಲಾಸ ಹೆರಿಗೆ ಆಸ್ಪತ್ರೆಯ ಪ್ರಾರಂಭೋತ್ಸವವನ್ನು ನೆರವೇರಿಸಲು ಶ್ರೀಮನ್ಮಹಾರಾಜರವರು ಆದಿನ ಸಾಯಂಕಾಲ ಕೋಟೆಯಲ್ಲಿ ನಿರ್ಮಿತವಾಗಿರುವ ನೂತನ ಭವನಕ್ಕೆ ಸಕಲ ರಾಜಮರ್ಯಾದೆಗಳೊಡನೆ ಅರಮನೆಯಿಂದ ಆಗಮಿಸಿದರು. ಮೈಸೂರು ಪ್ರಭುವರ್ಯರ ದಿವ್ಯದರ್ಶನವನ್ನು ಪಡೆಯಲು ಕಾತರತೆ ರಾಜಭಕ್ತಿಯುತರಾದ ಅಸಂಖ್ಯಾತ ರಾದ ಪ್ರಜೆಗಳಲ್ಲಿ ಉಕ್ಕಿ, ಹರಿಯುತ್ತಿದ್ದುದರಿಂದ, ಪ್ರಭುಗಳ ಸವಾರಿ ಚಿತ್ತೈಸಿದೊಡನೆಯೇ ನಭೋಮಂಡಲವನ್ನು ಭೇದಿಸುವಂತಹ ಜಯಜಯಘೋಷಗಳಾದವು. ಪ್ರಭುಗಳು ದಾರಿಯುದ್ದಕ್ಕೂ ತಮ್ಮ ರಾಜಭಕ್ತಿಯುತರಾದ ಪ್ರಜೆಗಳಿಂದ ಸಲ್ಲಿಸಲ್ಪಟ್ಟ ಜಯಘೋಷಗಳಿಗಾಗಿ ಅವರಿಗೆ ಕೈ ಮುಗಿಯುತ್ತಾ ರಾಜವಾಹನದಲ್ಲಿ ಮಂಡಿಸಿದ್ದರು.

ಈ ಸಮಾರಂಭಕಾಲದಲ್ಲಿ ಶ್ರೀಮನ್ಮಹಾರಾಜರವರು ಮಾಡಿದ ಭಾಷಣದಲ್ಲಿ ತಾವು, ಸುವಿಶಾಲವಾಗಿಯೂ ಭವ್ಯತರವಾಗಿಯೂ ಇರುವಂತೆ ನಿರ್ಮಿತವಾಗಿರುವ ಆ ಚಿಕಿತ್ಸಾಲಯದ ಪ್ರವೇಶ ಮಹೋತ್ಸವವನ್ನು ನೆರವೇರಿಸಲು ವಿಶೇಷ ಹರ್ಷಿತರಾಗಿ ಅಲ್ಲಿಗೆ ಬಂದಿರುವರೆಂದೂ, ಸರ್ವದಾ ತಮ್ಮ ಪ್ರೀತಿ ಭಕ್ತಿಗಳಿಗೆ ಪಾತ್ರರಾದ ತಮ್ಮ ಮಾತೃಶ್ರೀಯವರ ದಿವ್ಯನಾಮಾಂಕಿತದಿಂದ ಆ ಚಿಕಿತ್ಸಾಲಯವು ಶೋಭಿಸುತ್ತಿರುವ ಕಾರಣ, ಆ ಶುಭದಿನದ ಮಹೋತ್ಸವದಲ್ಲಿ ಭಾಗಿಗಳಾಗಲು ತಮಗೆ ಮತ್ತಷ್ಟು ಅಧಿಕವಾಗಿ ಹರ್ಷ ಉಂಟಾಗಿದೆಯೆಂದೂ ಹೇಳಿದರು. ಹೀಗೆ ತಮ್ಮ ಭಾಷಣವನ್ನು ಮುಂದುವರಿಸುತ್ತಾ,

ವಿಕ್ಟೋರಿಯಾ ಚಕ್ರವರ್ತಿನಿಯವರ ನಾಮಾಂಕಿತದ ಮೇಲೂ, ವೈಸರಾಯರಾಗಿದ್ದ ಲಾರ್ಡ್ ಮಿಂಟೋ ಅವರ ನಾಮಾಂಕಿತದ ಮೇಲೂ, ನಿರ್ಮಿತವಾಗಿರುವ ಚಿಕಿತ್ಸಾಲಯಗಳು ಇಲ್ಲಿಗೆ ಅತಿ ಸಮೀಪದಲ್ಲಿರುವುದು ಸರಿಯಷ್ಟೆ. ಸೀನಿಯರ್ ಸರ್ಜನ್‌ರವರು ಸೂಚಿಸಿರುವಂತೆ ಇವೆರಡು ಚಿಕಿತ್ಸಾಲಯಗಳಿಗೂ ಅತಿ ಸಮೀಪವಾಗಿರುವ ಹಾಗೆ ಸ್ತ್ರೀಯರಿಗೂ, ಶಿಶುಗಳಿಗೂ, ಚಿಕಿತ್ಸಾಲಯ ಒಂದನ್ನು ನಿರ್ಮಿಸಬೇಕೆಂಬ ತೀವ್ರಾಭಿಲಾಷೆ ನಮ್ಮ ಸರಕಾರದವರಿಗೆ ಬಹು ಕಾಲದಿಂದಲೂ ಇದ್ದಿತು. ಅದು ಈಗ ನೆರವೇರಿರುವುದಕ್ಕಾಗಿ ಹರ್ಷಿಸುತ್ತೇವೆ. ಈ ನಗರದಲ್ಲಿರುವ ದಯಾಮಯ ಹೃದಯರಾದ ಸ್ತ್ರೀಪುರುಷರಲ್ಲಿ ಅನೇಕರ ಸಹಾಯವು ಅದು ನೆರವೇರಲು ಬಹುಮಟ್ಟಿಗೆ ಸಾಧಕವಾಯಿತು. ಹೃತ್ಪೂರ್ವಕವಾದ ನಮ್ಮ ವಂದನೆಗಳು ಅವರಿಗೆ ಸಲ್ಲಬೇಕಾಗಿವೆ. ಈ ಕಟ್ಟಡಕ್ಕಾಗಿ ಉದಾರವಾಗಿ ಧನಸಹಾಯಮಾಡಿದ ಅವರ ಔದಾರ್ಯವೂ, ಪರೋಪಕಾರಬುದ್ಧಿಯೂ,

ಗಾಢವಾದ ನಮ್ಮ ಮೆಚ್ಚಿಕೆಗೆ ಪಾತ್ರವಾಗಿದೆ. ಈ ಚಿಕಿತ್ಸಾಲಯದ ಹಲಕೆಲವುಭಾಗಗಳು ಅವರ ನಾಮಾಂಕಿತದಿಂದ ಶೋಭಿಸುವಂತೆ ವ್ಯವಸ್ಥೆಮಾಡಿರುವ ಕಾರಣ ಅವರ ನಾಮಧೇಯಗಳು ಚಿರಸ್ಮರಣೀಯವಾಗಿರುತ್ತವೆ.

ಈ ಚಿಕಿತ್ಸಾಲಯದಿಂದ ಪ್ರಯೋಜನ ಹೊಂದುವವರೆಲ್ಲರೂ ಆ ಪುಣ್ಯಾತ್ಮರ ಉಪಕಾರಕ್ಕೆ ಚಿರಕಾಲ ಕೃತಜ್ಞರಾಗಿರುವಂತಾಗಲೆಂದು ಹಾರೈಸುವೆವು. ಆದರೆ, ಪುಣ್ಯಾತ್ಮರು ಮಾಡಿರುವಂತಹ ಧರ್ಮಕಾರ್ಯವು ಇತರರ ಅಭಿನಂದನದಿಂದ ಅಥವಾ ಇತರರ ಕೃತಜ್ಞತೆಯಿಂದ ಹರ್ಷ ಜನಕ ವೆನಿಸಬೇಕಾಗಿಲ್ಲ. ಅಂತಹ ಧರ್ಮಾಚರಣೆ ಇತರ ಬಹಿರುಪಾಧಿಗಳ ಅವಲಂಬನವನ್ನೇ ಕೋರದು ; ಆ ಧರ್ಮಾಚರಣೆಯಿಂದಲೇ ಮನಸ್ಸು ಸಂತೃಪ್ತಿ ಹೊಂದಿ ಪ್ರಸನ್ನತೆಯನ್ನು ಪಡೆಯುವುದು. ಯಾರೊಬ್ಬರೇ ಆಗಲಿ, ಇತರರ ಕಷ್ಟನಿವಾರಣೆ ಮಾಡಿದಾಗ, ತಮ್ಮ ಹೃದಯಕ್ಕೆ ತಾವೇ ಅಮೃತ ಸೇಚನ ಮಾಡಿಕೊಂಡಂತೆ ಆಹ್ಲಾದವುಂಟಾಗುತ್ತದೆ. ಇತರರ ಅಭಿನಂದನವು ದೊರೆಯದೆ ಹೋದರೂ, ಅವರ ಆನಂದಕ್ಕೆ ಅದರಿಂದ ಲೇಶಮಾತ್ರವೂ ಕೊರತೆಯುಂಟಾಗದು.

ಶ್ರೀವಾಣೀವಿಲಾಸ ಚಿಕಿತ್ಸಾಲಯ ನಿಧಿಯ ಸಮಿತಿಯವರೂ ಸಹ ನಮ್ಮೆಲ್ಲರ ವಂದನೆಗಳಿಗೂ ಪಾತ್ರರಾಗಿದ್ದಾರೆ. ಸಮಿತಿಯವರಿಗೆ ನಮ್ಮೆಲ್ಲರ ವಂದನೆಗಳನ್ನೂ ಸಮರ್ಪಿಸಲು ನಾವು ವಿಶೇಷ ಹರ್ಷಿಸುವೆವು. ಈ ಚಿಕಿತ್ಸಾಲಯ ನಿರ್ಮಾಣ ಸಂಬಂಧದಲ್ಲಿ ಅವರು ಶ್ರದ್ಧಾಸಕ್ತಿಗಳಿಂದ ಕೂಡಿ ವಿಶೇಷವಾಗಿ ಶ್ರಮಿಸಿದ್ದಾರೆ. ಸಮಿತಿಯವರ ಮನೋರಥವು ಸಿದ್ಧಿಸಿರುವುದಕ್ಕಾಗಿ ಅವರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುವೆವು. ಕಟ್ಟಡದ ಉಳಿದ ಭಾಗವೂ ಶೀಘ್ರದಲ್ಲಿಯೇ ನಿರ್ಮಿತವಾಗುವ ಸುಯೋಗವು ಒದಗಲೆಂದು ಅವರು ಹಾರೈಸಿರುವರು. ಈ ಹಾರೈಕೆಯಲ್ಲಿ ನಾವೂ ಭಾಗಿಗಳಾಗಿ ಅವರಿಗೆ ಮನೋರಥ ಸಿದ್ಧಿಯನ್ನು ಬಯಸುವೆವು.

"ಶ್ರೀವಾಣೀವಿಲಾಸ ಚಿಕಿತ್ಸಾಲಯದ ಪ್ರವೇಶಮಹೋತ್ಸವವು ಇನ್ನು ನೆರವೇರಬಹುದೆಂದು ಸಂತೋಷದಿಂದ ನಾವು ಅನುಜ್ಞೆಯನ್ನಿತ್ತಿರುವೆವು. ಈ ಚಿಕಿತ್ಸಾಲಯವು ನಿಪುಣತೆಗೂ, ಸಹಾನುಭೂತಿಗಳೂ ಆಗರವೆನಿಸಿ, ಸುಪ್ರಸಿದ್ಧವಾಗಲೆಂದೂ, ಪ್ರಜೆಗಳ ಪ್ರೀತಿ ಕೃತಜ್ಞತೆಗಳಿಗೆ ಪಾತ್ರವಾಗಿ ಚಿರಕಾಲ ಬಾಳಲೆಂದೂ ಪೂರ್ಣಭರವಸೆಯುಳ್ಳವರಾಗಿ ನಾವು ಹಾರೈಸುವೆವು." ಎಂದು ಅಪ್ಪಣೆಕೊಡಿಸಿ ತಮ್ಮ ಭಾಷಣವನ್ನು ಮುಗಿಸಿದರು.

ಶ್ರೀಮನ್ಮಹಾರಾಜರವರು ಚಿಕಿತ್ಸಾಲಯದ ಆರಂಭೋತ್ಸವವನ್ನು ನೆರವೇರಿಸಿದ ತರುವಾಯ, ಮೆರವಣಿಗೆಯಲ್ಲಿಯೇ ಅರಮನೆಗೆ ಹಿಂದಿರುಗಿದರು.

## ೧೩. ಐದನೆಯ ಜಾರ್ಜ್ ಸಾರ್ವಭೌಮರವರ ರಜತಮಹೋತ್ಸವ

ಯಾವ ಚಕ್ರಾಧಿಪತ್ಯವು ಜಗತ್ತಿನ ಪ್ರಜಾಸಂಖ್ಯೆಯಲ್ಲಿ ನಾಲ್ಕನೆಯ ಒಂದು ಭಾಗವನ್ನು ಒಳಕೊಂಡಿದೆಯೋ, ಯಾವ ಚಕ್ರಾಧಿಪತ್ಯವು ಪ್ರಪಂಚದ ಸಮಸ್ತ ಕಡೆಗಳಲ್ಲಿಯೂ ವಿಸ್ತರಿಸಿರುವುದರಿಂದ ಸೂರ್ಯದೇವನು ವಿಶ್ರಾಂತಿರಹಿತನಾಗಿ ಸದಾ ಸಂಚರಿಸುತ್ತಾ ಬೆಳಗುತ್ತಿರುವನೋ, ಯಾವ ಚಕ್ರಾಧಿಪತ್ಯದ ರಾಜ್ಯ ಸೂತ್ರವು ಪ್ರಜಾಸಮ್ಮತಿಯಿಂದ ಕೇವಲ ಶಾಂತರೀತಿಯಲ್ಲಿ ಸಾಂಕುಶ ಪ್ರಭುತ್ವ ರೂಪದಲ್ಲಿ ನಡೆದು ಬಂದಿರುವುದೋ, ಅಂತಹ ಬ್ರಿಟಿಷ್ ಚಕ್ರಾಧಿಪತ್ಯದ ಸಾರ್ವಭೌಮರವರಾಗಿದ್ದ ಐದನೆಯ ಜಾರ್ಜ್ ಚಕ್ರವರ್ತಿಗಳ ಮತ್ತು ಮೇರಿ ಚಕ್ರವರ್ತಿನಿಯವರ ಇಪ್ಪತ್ತೈದು ವರ್ಷಗಳ ಅವಿಚ್ಛಿನ್ನವಾದ ಆಳ್ವಿಕೆಯಿಂದ ಬ್ರಿಟಿಷ್ ಸಾಮ್ರಾಜ್ಯದ ಸಮಸ್ತ ಪ್ರಜೆಗಳಿಗೂ ಉಂಟಾದ ಸಂತೋಷಾತಿಶಯಗಳನ್ನು ತೋರ್ಪಡಿಸಲು, ೧೯೩೫ನೆಯ ಇಸವಿ ಮೇ ತಿಂಗಳು ೬-೭ನೆಯ ತಾರೀಖುಗಳಲ್ಲಿ ಚಕ್ರಾಧಿಪತ್ಯದ ಸಮಸ್ತ ಭಾಗಗಳಲ್ಲಿಯೂ ರಜತಮಹೋತ್ಸವ ಸಮಾರಂಭವು ಪ್ರಜೆಗಳಿಂದ ಆಚರಿಸಲ್ಪಟ್ಟಿತು.

ರಜತಮಹೋತ್ಸವದ ದಿನ (೬-೫-೩೫) ಪ್ರಾತಃಕಾಲ ಚಕ್ರವರ್ತಿ ಸಾರ್ವಭೌಮರವರು ಲಂಡನ್ನಿನಲ್ಲಿ ಮಹಾರಾಣಿಯವರೊಂದಿಗೆ ಮೆರವಣಿಗೆ ಹೊರಟಾಗ ಮೂವತ್ತುಲಕ್ಷ ಜನರು ನೆರದು, ಅವರಿಗೆ ಜಯಘೋಷವನ್ನು ಮಾಡಿದರು. ಪ್ರಭುಗಳವರು ಎದ್ದುನಿಂತು ಎಲ್ಲರಿಗೂ ತಮ್ಮ ಪ್ರಸನ್ನ ಮುಖಭಾವದಿಂದ ಹರ್ಷವನ್ನು ಸೂಚಿಸುತ್ತಾ, ವಂದನೆಯನ್ನರ್ಪಿಸುತ್ತಿದ್ದರು. ಮೆರವಣಿಗೆಯಲ್ಲಿ ಇಂಡಿಯ ದೇಶೀಯ ಸಂಸ್ಥಾನಾಧೀಶ್ವರರನೇಕರು ಇದ್ದು, ತಮ್ಮ ಕೃತಜ್ಞತೆಯನ್ನು ತೋರ್ಪಡಿಸಿದರು.

ಚಕ್ರವರ್ತಿಗಳು, ರಜತಮಹೋತ್ಸವ ಸಂದರ್ಭದಲ್ಲಿ ಕೊಟ್ಟ ಸಂದೇಶದಲ್ಲಿ, "ನನಗೆ ಇನ್ನು ಉಳಿದಿರುವ ಆಯುಸ್ಸಿನಲ್ಲಿ ನವೋತ್ಸಾಹದಿಂದ ನಿಮ್ಮ ಸೇವೆಯನ್ನು ಮಾಡುತ್ತೇನೆ. ನಾನೂ ನನ್ನ ರಾಜ್ಞಿಯೂ, ನೀವು ತೋರಿಸಿರುವ ಪ್ರೀತಿಗೌರವಗಳಿಗಾಗಿ ಮನಃಪೂರ್ವಕವಾಗಿ ನಿಮ್ಮನ್ನು ವಂದಿಸುತ್ತೇವೆ. ಇಂಡಿಯ ಮತ್ತು ಡೊಮಿನಿಯನ್ ಮುಂತಾದ ಕಡೆಗಳಿಂದ ಬಂದ ಅಭಿನಂದನಗಳಿಗಾಗಿ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ನಾನು ನಮ್ಮ ಪ್ರೀತಿಪಾತ್ರರಾದ ಪ್ರಜೆಗಳನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ. ದೇವರು ಅವರಿಗೆ ಮಂಗಳವನ್ನುಂಟುಮಾಡಲಿ." ಎಂದು ಹೇಳಿದರು.

ಬ್ರಿಟಿಷ್ ಸಿಂಹಾಸನದಲ್ಲಿ ಅತುಲಭಕ್ತಿಯನ್ನಿರಿಸಿಕೊಂಡಿರುವ ಭಾರತೀಯರೂ, ಬ್ರಿಟಿಷ್ ಸಾಮ್ರಾಜ್ಯದ ಇತರ ಜನಾಂಗಗಳೊಂದಿಗೆ ಈ ಸಮಾರಂಭದಲ್ಲಿ ಬೆರೆತು, ತಮ್ಮ ಅದ್ವಿತೀಯವಾದ ರಾಜಭಕ್ತಿಯನ್ನೂ, ಆಂತರಿಕವಾದ ಪ್ರೇಮವಿಶ್ವಾಸಗಳನ್ನೂ ವ್ಯಕ್ತಗೊಳಿಸಿದರು. ಶ್ರೀಮದಿಂಡಿಯ ಚಕ್ರವರ್ತಿಗಳ ಗೌರವಪ್ರೇಮಾಭಿಮಾನಗಳಿಗೆ ಪಾತ್ರವಾಗಿ, ಅವರಿಂದಲೇ ಪರಿಪೋಷಿಸಲ್ಪಟ್ಟು ಜಗತ್ತಿಗೇ ಆದರ್ಶಪ್ರಾಯವಾಗಿರುವ ಮೈಸೂರು ಸಂಸ್ಥಾನವೂ ಈ ಸಂಭ್ರಮದಲ್ಲಿ ಉತ್ಸಾಹಪೂರ್ವಕವಾಗಿ ಭಾಗವಹಿಸಿ, ತನ್ನ ಭಕ್ತಿಪುರಸ್ಸರವಾದ ಕಾಣಿಕೆಯನ್ನು ಚಕ್ರವರ್ತಿಗಳ ಪಾದಗಳಲ್ಲಿ ಸಮರ್ಪಿಸಿತು.

ಜಾರ್ಜ್ ಪ್ರಭುವರ್ಯರು ತಮ್ಮ ಧರ್ಮಪತ್ನಿಯವರೊಂದಿಗೆ ಬ್ರಿಟಿಷ್ ಸಾಮ್ರಾಜ್ಯದ ರಾಜ್ಯಭಾರವನ್ನು ವಹಿಸುವುದಕ್ಕೆ ಮೊದಲು ೧೯೦೫ರಲ್ಲಿ ಇಂಡಿಯದೇಶಕ್ಕೆ ಚಿತ್ತೈಸಿ, ಇಲ್ಲಿನ ಪ್ರಜೆಗಳಿಗೆ ದರ್ಶನಲಾಭವನ್ನು ಕೊಟ್ಟು. ಅವರ ಹೃತ್ಪೂರ್ವಕವಾದ ಸ್ವಾಗತವನ್ನು ಪಡೆದು, ಭಾರತವರ್ಷದಲ್ಲಿ ತಮಗಿರುವ ಆಸಕ್ತಿಯನ್ನೂ, ಸಹಾನುಭೂತಿಯನ್ನೂ ಸ್ಪಷ್ಟಪಡಿಸಿದರು. ಇವರ ತಂದೆಯವರಾದ ಏಳನೆಯ ಎಡ್ವರ್ಡ್ ಸಾರ್ವಭೌಮರವರು ೧೯೧೦ರಲ್ಲಿ ದೈವಾಧೀನರಾಗಲು ಐದನೆಯ ಜಾರ್ಜ್ ಪ್ರಭುಗಳವರ ಮತ್ತು ಮೇರಿ ಚಕ್ರವರ್ತಿನಿಯವರ ಸಿಂಹಾಸನಾರೋಹಣದ ಸಮಾರಂಭವು ಅದೇ ವರ್ಷದಲ್ಲಿ ನೆರವೇರಿತು. ಮಾರನೆಯವರ್ಷ ಅಂದರೆ ೧೯೧೧ರಲ್ಲಿ ಈ ರಾಜದಂಪತಿಗಳು ಇಂಡಿಯ ದೇಶಕ್ಕೆ ಬಂದು, ಡೆಲ್ಲಿಯಲ್ಲಿ ಕಿರೀಟಧಾರಣ ಮಹೋತ್ಸವವನ್ನು ಮಾಡಿಕೊಂಡರು. ಇದುಮೊದಲು ಕಲ್ಕತ್ತೆಯ ಬದಲು ಡೆಲ್ಲಿಯು ಇಂಡಿಯದೇಶದ ರಾಜಧಾನಿಯಾಯಿತು. ರಾಜ್ಯಭಾರವನ್ನು ವಹಿಸಿದ ಮೇಲೆ ಇವರ ಹಾಗೆ ಯಾವ ಚಕ್ರವರ್ತಿ ಸಾರ್ವಭೌಮ ದಂಪತಿಗಳೂ ಹಿಂದುಸ್ಥಾನಕ್ಕೆ ದಯೆಮಾಡಿಸಿ ಕಿರೀಟಧಾರಣೆಯನ್ನು ಪಡೆದು, ದರಬಾರನ್ನು ನಡೆಸಿರುವುದಿಲ್ಲ.

೧೯೧೧ನೆಯ ಇಸವಿ ಡಿಸೆಂಬರ್ ೧೨ನೆಯ ತಾರೀಖಿನದಿನ ಡೆಲ್ಲಿಯಲ್ಲಿ ನಡೆಸಿದ ದರಬಾರಿನಲ್ಲಿ ಚಕ್ರವರ್ತಿಯವರು ಭಾಷಣ ಮಾಡುತ್ತಾ, "ನಾವು ನಮ್ಮ ಪೂರ್ವಿಕರು ಭಾರತೀಯರಿಗೆ ಕೊಟ್ಟಿದ್ದ ವಚನಗಳನ್ನು ಪಾಲಿಸುವೆವು. ಭಾರತೀಯರ ಸೌಖ್ಯಸೌಲಭ್ಯಗಳಿಗೆ ಸಾಧಕವಾದ ಸರ್ವಸ್ವಾತಂತ್ರ್ಯಗಳನ್ನು ಕಾಪಾಡುವೆವು. ಭಾರತೀಯರ ಶಾಂತಿ ಮತ್ತು ತೃಪ್ತಿಗಾಗಿ ಪ್ರಯತ್ನಿಸುವೆವು. ದೇವರು ನಮಗೆ ಈ ಶಕ್ತಿಯನ್ನು ಕೊಟ್ಟು, ನಿಮ್ಮಗಳಿಗೆಲ್ಲಾ ಸುಖಸಂಪತ್ತುಗಳನ್ನು ಕೊಡಲೆಂದು ಹಾರೈಸುವೆವು." ಎಂದು ಹೇಳಿದರು. ಚಕ್ರವರ್ತಿನಿ ಮೇರಿಯವರೂ ಸಾರ್ವಭೌಮರಂತೆಯೇ ಬ್ರಿಟಿಷ್ ಚಕ್ರಾಧಿಪತ್ಯದ ಸಕಲ ಪ್ರಜೆಗಳ ಯೋಗಕ್ಷೇಮವನ್ನೂ ವಿಚಾರಿಸುತ್ತಾ ಅವರ ಶ್ರೇಯೋಭಿವೃದ್ಧಿಯನ್ನು ಬಯಸುವುದರಲ್ಲಿಯೇ ಆಸಕ್ತರಾಗಿರುವರು.

ಕೆಲವು ವರ್ಷಗಳ ಹಿಂದೆ (೧೯೧೪-೧೯೧೮) ಯೂರೋಪ್ ಖಂಡದಲ್ಲಿ ಅತ್ಯುಗ್ರ ಸ್ವರೂಪವನ್ನು ಪಡೆದು. ನಡೆದ ಘೋರ ಸಂಗ್ರಾಮ ಸಮಯದಲ್ಲಿ ಭಾರತೀಯರೆಲ್ಲರೂ ಏಕೀಭವಿಸಿ, ಧನದಿಂದಲೂ, ಜನದಿಂದಲೂ ಬ್ರಿಟಿಷ್ ಸಾರ್ವಭೌಮರವರಿಗೆ ಅಸದೃಶವಾದ ಸಹಾಯ ಸಂಪತ್ತಿಗಳನ್ನು ಒದಗಿಸಿಕೊಟ್ಟು, ವಿಜಯಲಕ್ಷ್ಮಿಯು ಬ್ರಿಟಿಷರ ಕೈಸೇರುವಂತೆ ಮಾಡಿದರು. ಈ ಸಂದರ್ಭದಲ್ಲಿ ಮೈಸೂರು ಮಹಾರಾಜರವರಿಂದಲೂ ಅವರ ಪ್ರಜೆಗಳಿಂದಲೂ ಇಂಗ್ಲಿಷಿನವರಿಗೆ ತಕ್ಕ ಸಹಾಯ ದೊರೆಯಿತು. ದೇಶೀಯ ಸೈನಿಕರು ಈ ಯುದ್ಧದಲ್ಲಿ ಧೈರ್ಯದಿಂದ ಕಾದು, ಮೈಸೂರು ದೇಶಕ್ಕೆ ಕೀರ್ತಿಯನ್ನು ತಂದರು. ಯುದ್ಧಕಾಲದಲ್ಲಿ ಮೈಸೂರು ಮಹಾರಾಜರವರು ಹಿಂದು ಸೈನ್ಯಕ್ಕೆ ನಮ್ಮ ದೇಶದಿಂದ ೫,೦೦೦ ಮಂದಿಯನ್ನು ಒದಗಿಸಿಕೊಟ್ಟರು. ಮೈಸೂರಿನ ಆಳುವ ಮಹಾಸ್ವಾಮಿಯವರೂ, ಅವರ ಪ್ರಜೆಗಳೂ, ಯುದ್ಧಕ್ಕೆ ಮಾಡಿದ ದ್ರವ್ಯಸಹಾಯ ಸುಮಾರು ಎರಡು ಕೋಟಿ ರೂಪಾಯಿಗಳಾಗುತ್ತವೆ.

ಇಂತಹ ಆದರ್ಶಪ್ರಾಯರಾಗಿದ್ದ ಪಂಚಮ ಜಾರ್ಜ್ ಚಕ್ರವರ್ತಿಗಳು ತಮ್ಮ ರಜತಮಹೋತ್ಸವವಾದ ಒಂದು ವರ್ಷದೊಳಗಾಗಿ ವಿಧಿವಶರಾಗುವರೆಂದು, ಯಾರೊಬ್ಬರೂ ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ. ಕೆಲವು ವರ್ಷಗಳಿಂದ ಆರೋಗ್ಯವು ಸ್ವಲ್ಪ ಕಡಿಮೆಯಾಗಿದ್ದ ಇವರು. ೧೯೩೬ನೆಯ ಜನವರಿ ೧೭ನೆಯ ತಾರೀಖು ಶ್ವಾಸನಾಳದ ಹುಣ್ಣಿನ ವ್ಯಾಧಿಯು ಪ್ರಾಪ್ತವಾಗಿ ಮೂರು ದಿನಗಳು ನರಳುತ್ತಿದ್ದು. ೨೦ನೆಯ ತಾರೀಖು ಸೋಮವಾರ ಸಮರಾತ್ರಿಯಲ್ಲಿ ಅನಾಯಾಸವಾಗಿ ತಮ್ಮ ಭೌತಿಕ ಶರೀರವನ್ನು ತ್ಯಜಿಸಿ ಪರಲೋಕವನ್ನೈದಿದರು. ಇವರ ನಿಧನದಿಂದ ಬ್ರಿಟಿಷ್ ಚಕ್ರಾಧಿಪತ್ಯ ಮಾತ್ರವಲ್ಲ, ಜಗತ್ತೇ ಶೋಕಸಾಗರದಲ್ಲಿ ಮುಳುಗಿತು.

ಜಾರ್ಜ್ ಪ್ರಭುಗಳು ರಾಜ್ಯಭಾರವನ್ನು ವಹಿಸಿದಂದಿನಿಂದ ಸ್ವಸುಖವನ್ನು ಸ್ವಲ್ಪವೂ ಲಕ್ಷಿಸದೆ. ಪ್ರಜಾವಾತ್ಸಲ್ಯ ಪರಿಪೂರ್ಣರಾಗಿಯೂ, ರಾಷ್ಟ್ರ ಸೇವಾಕಾಂಕ್ಷೆಯಿಂದ ಪ್ರೇರಿತರಾಗಿಯೂ, ನಿಸ್ವಾರ್ಥತೆಯಿಂದ ದೇಶಸೇವೆಮಾಡಿ ಸಮಸ್ತರ ಪ್ರೀತಿಗೌರವಗಳಿಗೂ ಪಾತ್ರರಾಗಿದ್ದರು.

ಇವರ ತರುವಾಯ ಇವರ ಜೇಷ್ಠಪುತ್ರರು ಎಂಟನೆಯ ಎಡ್ವರ್ಡ್‌ರೆಂಬ ಅಭಿಧಾನದಿಂದ ಬ್ರಿಟಿಷ್ ಸಿಂಹಾಸನವನ್ನೇರಿ ಚಕ್ರವರ್ತಿ ಸಾರ್ವಭೌಮ ಪದವಿಯನ್ನು ವಹಿಸಿದರು. ಆದರೆ ಇವರು ಕೆಲವು ತಿಂಗಳೊಳಗಾಗಿ ಕಾರಣಾಂತರದಿಂದ ಸಿಂಹಾಸನವನ್ನೂ ಅದರ ಹಕ್ಕುಬಾಧ್ಯತೆಗಳನ್ನೂ ತ್ಯಜಿಸಿದರು. ಇದರಿಂದ ಇವರ ತಮ್ಮಂದಿರಾದ ಡ್ಯೂಕ್ ಆಫ್ ಯಾರ್ಕ್ ಅವರು ಆರನೆಯ ಜಾರ್ಜ್‌ರೆಂಬ ಹೆಸರಿನಿಂದ ಪಟ್ಟಕ್ಕೆ ಬಂದರು. ಇವರ ಮತ್ತು ಇವರ ಧರ್ಮಪತ್ನಿ ಚಕ್ರವರ್ತಿನಿ ಎಲಿಜಬೆತ್ ರಾಣಿಯವರ ಕಿರೀಟಧಾರಣ ಮಹೋತ್ಸವವು ೧೯೩೭ನೆಯ ಮೇ ೧೨ನೆಯ ತಾರೀಖು ಲಂಡನ್ನಿನಲ್ಲಿ ಅತಿ ವೈಭವದಿಂದ ನಡೆಯಿತು. ಪ್ರಪಂಚದ ನಾನಾ ಭಾಗಗಳಿಂದ ಪ್ರತಿನಿಧಿಗಳು ಈ ಸಮಯದಲ್ಲಿ ಬಂದಿದ್ದು, ಚಕ್ರವರ್ತಿ ಸಾರ್ವಭೌಮರವರಿಗೆ ಅಪಾರವಾದ ಆನಂದವನ್ನುಂಟುಮಾಡಿದರು.

ಈ ನೂತನ ಸಾರ್ವಭೌಮ ದಂಪತಿಗಳ ರಾಜ್ಯಭಾರವು ಸಮಸ್ತ ಪ್ರಜೆಗಳಿಗೂ ಸುಖಶಾಂತಿದಾಯಕಗಳಾಗಿ ಪರಿಣಮಿಸಲೆಂದೂ, ಇವರು ದೀರ್ಘಕಾಲ ನಮ್ಮನ್ನು ಆಳುವಂತೆ ಕರುಣಾಮಯನಾದ ಭಗವಂತನು ಇವರಿಗೆ ಆಯುರಾರೋಗ್ಯವನ್ನು ಅನುಗ್ರಹಿಸಲೆಂದೂ ನಾವೆಲ್ಲರೂ ಹಾರೈಸೋಣ.

## ೧೪. ಶ್ರೀವಾಣೀವಿಲಾಸ ಸೇತುವೆ

ಶ್ರೀವಾಣೀವಿಲಾಸ ಹೆರಿಗೆ ಆಸ್ಪತ್ರೆಯ ಪ್ರಾರಂಭೋತ್ಸವವು ನೆರವೇರಿದ ಎಂಟು ತಿಂಗಳುಗಳಿಗೆ ಸರಿಯಾಗಿ, ೧೯೩೫ನೆಯ ನವೆಂಬರ್ ೮ನೆಯ ತಾರೀಖಿನ ದಿನ ಇಂಡಿಯ ಸರಕಾರದ ಕೈಗಾರಿಕೆಯ ಸಚಿವರಾದ ಸರ್ ಫ್ರಾಂಕ್ ನಾಯಿಸ್ ಅವರು ತಿರಮಕೂಡ್ಲು ನರಸೀಪುರದ ಬಳಿ ಕಪಿಲಾ ನದಿಗೆ ಹೊಸದಾಗಿ ಕಟ್ಟಿದ ಶ್ರೀವಾಣೀವಿಲಾಸ ಸೇತುವೆಯ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಈ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಚೀಫ್ ಇಂಜನಿಯರಾದ ಶ್ರೀ ದಿವಾನ್‌ಬಹದ್ದೂರ್ ಎನ್. ಎನ್. ಅಯ್ಯಂಗಾರ್ಯರವರು ಸರ್ ಫ್ರಾಂಕ್ ನಾಯಿಸ್ ಅವರಿಗೆ ಒಂದು ಬಿನ್ನವತ್ತಳೆಯನ್ನು ಅರ್ಪಿಸಿ, ಮಾಡಿದ ಭಾಷಣದಲ್ಲಿ ಈ ಸೇತುವೆಯ ಇತಿಹಾಸವನ್ನು ವಿವರಿಸುತ್ತಾ, “ಈ ಸೇತುವೆಯು ಕಾವೇರಿ ಕಪಿಲಾ ನದಿಗಳ ಸಂಗಮಕ್ಕೆ ಬಹು ಸಮೀಪದಲ್ಲಿದೆ. ಇಲ್ಲಿಗೆ ಮೈಸೂರು ಸಂಸ್ಥಾನದ ರಾಜಧಾನಿಯಾದ ಮೈಸೂರು ನಗರವು ಸುಮಾರು ೨೮ ಮೈಲಿಗಳ ದೂರದಲ್ಲಿದೆ. ಶಿವನಸಮುದ್ರದ ಸುಪ್ರಸಿದ್ಧ ಜಲಪಾತವೂ, ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವ ಬ್ಲಫ್ ಯಂತ್ರಶಾಲೆಯೂ, ಇಲ್ಲಿಗೆ ಸುಮಾರು ೨೫ ಮೈಲಿಗಳ ದೂರದಲ್ಲಿದೆ. ಕಾವೇರೀ ನದಿಯೂ ಕಪಿಲಾ ನದಿಯೂ ವರ್ಷದಲ್ಲಿ ಅನೇಕ ತಿಂಗಳುಗಳ ಕಾಲ ಬಹಳ ನೀರಿನಿಂದ ತುಂಬಿರುತ್ತವೆ. ದೋಣಿ ಹರಿಗೋಲುಗಳ ಸಂಚಾರಕ್ಕೆ ಅವಕಾಶವಿಲ್ಲದಂತೆ ಅವುಗಳ ಪ್ರವಾಹವು ಭೋರ್ಗರೆಯುತ್ತದೆ. ಆಗ್ಗ ಅವುಗಳನ್ನು ದಾಟುವುದು ಅಸಾಧ್ಯವಾಗಿರುವುದು. ಆದಕಾರಣ, ಇವೆರಡು ನದಿಗಳಿಗೂ ಸೇತುವೆಗಳನ್ನು ಕಟ್ಟಿಸಬೇಕಾದುದು ಬಹುಕಾಲದಿಂದಲೂ ಆವಶ್ಯಕವಾಗಿತ್ತು. ಇಲ್ಲಿಗೆ ಸುಮಾರು ಅರ್ಧ ಮೈಲಿ ದೂರದಲ್ಲಿ ಕಾವೇರೀ ಕಪಿಲಾ ನದಿಗಳೆರಡೂ ಒಟ್ಟುಗೂಡಿ ಪ್ರವಹಿಸುವೆಡೆಯಲ್ಲಿ ಒಂದೇ ಒಂದು ಸೇತುವೆಯನ್ನು ಕಟ್ಟುವುದನ್ನು ಬಿಟ್ಟು, ಇಷ್ಟು ಸಮೀಪ ಸಮೀಪವಾಗಿ ಕಾವೇರೀ ನದಿಗೊಂದು ಸೇತುವೆಯನ್ನೂ, ಕಪಿಲಾನದಿಗೊಂದು ಸೇತುವೆಯನ್ನೂ, ಕಟ್ಟಿರುವುದೇಕೆಂಬುದಾಗಿ, ಮೊದಲು, ನೋಟಕರಿಗೆ ಸಂಶಯ ಬರುತ್ತದೆ. ಹೀಗೆ ಎರಡು ಸೇತುವೆಗಳನ್ನು ಕಟ್ಟದೆ, ಒಂದೇ ಒಂದು ಸೇತುವೆಯನ್ನು ಮಾತ್ರವೇ ಕಟ್ಟಿದ್ದ ಪಕ್ಷಕ್ಕೆ ಕಾವೇರೀ ಕಪಿಲಾನದಿಗಳ ಬಯಲಿನ ಫಲವತ್ತಾದ ಪ್ರದೇಶದಲ್ಲಿ ನೆಲೆಗೊಂಡಿರುವ ಮೈಸೂರು ನಗರವು ಸರಿಯಾದ ಸಂಚಾರ ಸಂಬಂಧವಿಲ್ಲದೆ ಆಗಲೂ ಮೊದಲಿನಂತೆಯೇ ಕೇವಲ ಪ್ರತ್ಯೇಕವಾಗಿಯೇ ಉಳಿದಿರಬೇಕಾಗುತ್ತಿತ್ತು. ಒಂದು ಕಡೆ ಮೈಸೂರಿನಿಂದ ಮಳವಳ್ಳಿಗೂ, ಶಿವನಸಮುದ್ರಕ್ಕೂ, ಇನ್ನೊಂದು ಕಡೆ ಮೈಸೂರಿನಿಂದ ಚಾಮರಾಜನಗರಕ್ಕೂ, ಸತ್ಯಮಂಗಲಕ್ಕೂ ಸಂಚಾರಮಾರ್ಗಗಳು ಏರ್ಪಡುವುದಕ್ಕೇ ಆಗ್ಗ ಅವಕಾಶವಿರುತ್ತಿರಲಿಲ್ಲ. ಈ ಪ್ರದೇಶದಲ್ಲಿ ಕಾವೇರೀ ನದಿಗೊಂದು ಸೇತುವೆಯನ್ನೂ, ಕಪಿಲಾ ನದಿಗೊಂದು ಸೇತುವೆಯನ್ನೂ ಕಟ್ಟಿರುವುದರಿಂದ ಮೈಸೂರು ಸಂಸ್ಥಾನಕ್ಕೂ, ಮದರಾಸು ಮತ್ತು ಕೊಡಗು ಪ್ರಾಂತಗಳಿಗೂ ಪರಸ್ಪರವಾಗಿ ಸಂಪೂರ್ಣವಾದ ಸಂಬಂಧವನ್ನು ಕಲ್ಪಿಸಿ ಸಂಚಾರಮಾರ್ಗಗಳನ್ನೇರ್ಪಡಿಸಲಾಗಿದೆ. ಈ ಸೇತುವೆಯಲ್ಲಿ ಎಂಬತ್ತು ಎಂಬತ್ತು ಅಡಿಗಳ ಅಂತರವುಳ್ಳ ಒಂಬತ್ತು ಕಣ್ಣುಗಳೂ, ಅರುವತ್ತು ಅರುವತ್ತು ಅಡಿಗಳ ಅಂತರವುಳ್ಳ ಎರಡು ಕಣ್ಣುಗಳೂ ಇವೆ.

ಕೈಪಿಡಿ ಗೋಡೆಗಳ ಮಧ್ಯದಲ್ಲಿ ೧೮ ಅಡಿಗಳಿರುವಂತೆ ಸೇತುವೆಯಮೇಲಿನ ರಸ್ತೆಯನ್ನು ಮಾಡಿಸಲಾಗಿದೆ. ಈ ಸೇತುವೆಗಾಗಿ ೩,೪೫,೦೦೦ ರೂಪಾಯಿಗಳು ವೆಚ್ಚಾವಾಗಿವೆ. ಇಂಡಿಯ ಸರಕಾರದವರು 'ರಸ್ತೆಯ ನಿಧಿ' ಯಿಂದ ಈ ಸೇತುವೆಯ ವೆಚ್ಚದಲ್ಲಿ ಅರ್ಧ ಮೊಬಲಗನ್ನು ಕೃಪೆಮಾಡಿ ಕೊಡದೆಹೋಗಿದ್ದ ಪಕ್ಷಕ್ಕೆ, ಇನ್ನೂ ಅನೇಕ ವರ್ಷಗಳ ಕಾಲದವರೆಗೆ ಈ ಸೇತುವೆಯನ್ನು ಕಟ್ಟಿಸುವುದು ಮೈಸೂರು ಸರಕಾರದವರಿಗೆ ಅಸಾಧ್ಯವಾಗಿಯೇ ಇರುತ್ತಿದ್ದಿತು. ಕಾವೇರೀ ನದಿಯ ಸೇತುವೆಯ ಮೇಲಣ ಸಂಚಾರ ಸಮಾರಂಭದ ಮಹೋತ್ಸವವನ್ನು ೧೯೩೨ನೆಯ ಆಗಸ್ಟ್ ೨೯ರಲ್ಲಿ ಆಳುವ ಮಹಾಸ್ವಾಮಿಯವರು ನೆರವೇರಿಸಿದರು. ಅದು ಶ್ರೀ ಕೃಷ್ಣರಾಜೇಂದ್ರ ಸೇತುವೆ* ಎಂದು ಅವರ ದಿವ್ಯನಾಮಾಂಕಿತದಿಂದ ಶೋಭಿಸುತ್ತಿದೆ. ಕಪಿಲಾ ನದಿಗೆ ಕಟ್ಟಿರುವ ಈ ಸೇತುವೆಗೆ ಕೀರ್ತಿಶೇಷರಾದ ಶ್ರೀ ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರ ನಾಮಾಂಕಿತವನ್ನಿಡಬಹುದೆಂದು ಶ್ರೀಮನ್ಮಹಾರಾಜರವರು ಕೃಪೆಮಾಡಿ ಅನುಮತಿಯನ್ನು ದಯೆಪಾಲಿಸಿದ್ದಾರೆ. ಸಂಸ್ಥಾನದ ಪುರೋಭಿವೃದ್ಧಿಯಲ್ಲಿ ಮಹಾಮಾತೃಶ್ರೀಯವರಿಗಿದ್ದ ತೀವ್ರಾಸಕ್ತಿಯು ಸುಪ್ರಸಿದ್ಧವಾಗಿದೆ. ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಸಮಸ್ತ ಪಂಗಡಗಳವರೂ, ಸಮಸ್ತ ಕೋಮುಗಳವರೂ ಮಹಾಮಾತೃಶ್ರೀಯವರ ಉಪಕಾರಗಳನ್ನು ಎಂದೆಂದಿಗೂ ಕೃತಜ್ಞತಾ ಪೂರ್ವಕವಾಗಿ ತಮ್ಮ ನೆನಪಿನಲ್ಲಿಟ್ಟುಕೊಂಡಿರುತ್ತಾರೆ." ಎಂಬುದಾಗಿ ಹೇಳಿ, ಈ ವಾಣೀವಿಲಾಸ ಸೇತುವೆಯ ಮೇಲೆ ಸಮಸ್ತಜನಗಳೂ, ಸಮಸ್ತ ಕಾಲ್ನಡೆಗಳೂ, ಸಚೇತನವೆನಿಸಿದ ಸಮಸ್ತ ಪ್ರಾಣಿಗಳೂ, ಅಚೇತನವೆನಿಸಿದ ಸಮಸ್ತ ವಾಹನಗಳೂ ಸಂಚರಿಸಲು ಅಪ್ಪಣೆಯನ್ನಿತ್ತು ಈ ಸೇತುವೆಯ ಮೇಲಣ ಸಂಚಾರ ಸಮಾರಂಭ ಮಹೋತ್ಸವವನ್ನು ನೆರವೇರಿಸಬೇಕೆಂದು ಪ್ರಾರ್ಥಿಸಿದರು.

ಸರ್ ಪ್ರಾಂಕ್ ನಾಯಿಸ್ ಅವರು, ತಮ್ಮ ಭಾಷಣದಲ್ಲಿ ಮೈಸೂರು ಸಂಸ್ಥಾನದ ಚರಿತ್ರೆಯಲ್ಲಿ ತಮಗಿರುವ ತೀವ್ರಾಸಕ್ತಿಯನ್ನೂ, ಶ್ರೀಮನ್ಮಹಾರಾಜರವರಲ್ಲಿಯೂ, ಶ್ರೀವಾಣೀವಿಲಾಸ ಸನ್ನಿಧಾನದವರಲ್ಲಿಯೂ ತಮಗಿರುವ ಪ್ರೀತಿ ಗೌರವಗಳನ್ನೂ ವ್ಯಕ್ತಗೊಳಿಸಿ, ಉದಾರ ಹೃದಯರಾದ ಆಳುವ ಮಹಾಸ್ವಾಮಿಯವರ ವ್ಯಕ್ತಿಪ್ರಭಾವವನ್ನು ಕೊಂಡಾಡಿದರು. ಅಂದಿನ ಸಮಾರಂಭವು ಮುಗಿಯುವುದಕ್ಕೆ ಮೊದಲು ಸರ್ ಪ್ರಾಂಕ್‌ನಾಯಿಸ್ ಅವರು ಶ್ರೀಮನ್ಮಹಾರಾಜರವರಿಗೂ, ಅವರ ಸರಕಾರಕ್ಕೂ, ದಿವಾನ್ ಸರ್ ಮಿರ್ಜಾ ಸಾಹೇಬರವರಿಗೂ, ದಿವಾನ್ ಬಹದ್ದೂರ್ ಶ್ರೀ ಎನ್. ಎನ್. ಅಯ್ಯಂಗಾರ್ಯರಿಗೂ ತಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಸಲ್ಲಿಸಿದರು.

ಭಾಷಣವನ್ನು ಪೂರೈಸುವುದಕ್ಕೆ ಮುಂಚೆ ಸರ್ ಪ್ರಾಂಕ್ ನಾಯಿಸ್ ಅವರು ಸರ್ವ ವಿಷಯಗಳಲ್ಲಿಯೂ ಮೈಸೂರು ಮುಂದುವರಿದಿದೆಯೆಂದು ಅಭಿಪ್ರಾಯಪಟ್ಟು, ಅಖಿಲಭಾರತಕ್ಕೆ ಸಂಬಂಧಪಟ್ಟ ಉದ್ಯಮಗಳಲ್ಲಿ ಮೈಸೂರು ಹೇಗೆ ಭಾಗವಹಿಸಿ ತನ್ನ

---

* ಶ್ರೀ ಕೃಷ್ಣರಾಜೇಂದ್ರ ಸೇತುವೆಯು ೧೯೨೮ರಲ್ಲಿ ಪ್ರಾರಂಭವಾಗಿ ೧೯೩೨ರಲ್ಲಿ ಮುಗಿಯಿತು. ಈ ಸೇತುವೆಗೆ ೬,೦೨,೦೦೦ ರೂಪಾಯಿಗಳು ವೆಚ್ಚವಾಗಿವೆ.

ಕೈಯಿಯಲ್ಲಾದ ಸಹಾಯವನ್ನು ಮಾಡುತ್ತಿರುವುದು. ವ್ಯವಸಾಯ ಮತ್ತು ಕೈಗಾರಿಕೆಗಳ ವಿಷಯದಲ್ಲಿ ಮೈಸೂರು ಎಷ್ಟು ಮುಂದುವರಿದಿರುವುದು, ಕಾಫಿ ಪರಿಶೋಧನೆಯ ಕೆಲಸದಲ್ಲಿ ಮೈಸೂರಿನ ಉತ್ಸಾಹ, ಇತ್ಯಾದಿ ಅಂಶಗಳನ್ನು ನಮೂದಿಸಿ, ಫೆಡರೇಷನ್ ವಿಚಾರವನ್ನೆತ್ತಿ ಮಾತನಾಡುತ್ತಾ, ಬ್ರಿಟಿಷ್ ಭಾರತಕ್ಕೂ, ದೇಶೀಯ ಸಂಸ್ಥಾನಗಳಿಗೂ ಸಹಕಾರವನ್ನು ಉಂಟುಮಾಡಲು ಸಹಾಯವಾಗುವ ವಿಷಯಗಳನೇಕವಿವೆ ಎಂಬುದು ತಮ್ಮ ದೃಢವಾದ ಅಭಿಪ್ರಾಯವೆಂದು ತಿಳಿಸಿದರು. ಭಾರತದಲ್ಲಿ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯು ಸ್ಥಾಪಿತವಾದಾಗಲೂ, ಭಾರತದ ಅನೇಕ ಕಠಿನ ಸಮಸ್ಯೆಗಳನ್ನು ಬಗೆಹರಿಸುವಾಗಲೂ, ಭಾರತದ ಜನಾಂಗಗಳ ಜೀವನದ ಅಂತಸ್ತನ್ನು ಉತ್ತಮಪಡಿಸಿ, ದೇಶದಲ್ಲಿ ಶಾಂತಿ ಸ್ಥಾಪನೆಮಾಡುವ ಕಾರ್ಯದಲ್ಲಿಯೂ, ದೇಶೀಯ ಸಂಸ್ಥಾನಗಳು ಬ್ರಿಟಿಷ್ ಭಾರತದೊಡನೆ ಸಹಕರಿಸಬೇಕೆಂದು ತಾವು ಬಯಸುವುದಾಗಿ ಹೇಳಿ ಭಾಷಣವನ್ನು ಪರಿಸಮಾಪ್ತಿಮಾಡಿ, ಸೇತುವೆಯ ಪ್ರಾರಂಭೋತ್ಸವವನ್ನು ನೆರವೇರಿಸಿದರು.

ಶ್ರೀ ಕೃಷ್ಣರಾಜೇಂದ್ರ ಸೇತುವೆ, ಶ್ರೀವಾಣೀವಿಲಾಸ ಸೇತುವೆ, ಇವೆರಡರಿಂದ ಮೈಸೂರು ಸಂಸ್ಥಾನಕ್ಕೂ, ಮದರಾಸು ಮತ್ತು ಕೊಡಗು ಪ್ರಾಂತಗಳಿಗೂ ಪರಸ್ಪರವಾಗಿ ಸಂಪೂರ್ಣ ಸಂಬಂಧವನ್ನು ಕಲ್ಪಿಸಿದ ಹಾಗಾಯಿತು. ಈ ಸೇತುವೆಗಳಿಂದ ಒಂದು ಕಡೆ ಮೈಸೂರು, ತಲಕಾಡು, ಶಿವನಸಮುದ್ರ, ಶ್ರೀರಂಗಪಟ್ಟಣ, ಸೋಮನಾಥಪುರ, ಬನ್ನೂರು, ಮಳವಳ್ಳಿ ಮತ್ತು ಮಂಡ್ಯ ಇವುಗಳಿಗೂ, ಇನ್ನೊಂದು ಕಡೆ ತಿರಮಕೂಡ್ಲು ನರಸೀಪುರ, ಮೂಗುರು, ಸಂತೆಮಾರನಹಳ್ಳಿ ಮತ್ತು ಚಾಮರಾಜನಗರ ಇವುಗಳಿಗೂ, ಮತ್ತೊಂದು ಕಡೆ ಮದರಾಸು ಆಧಿಪತ್ಯದ ಕೊಳ್ಳೇಗಾಲ, ಸತ್ಯಮಂಗಲ ಮತ್ತು ಕೊಯಮತ್ತೂರು ಈ ಪ್ರಾಂತಗಳಿಗೂ ಹತ್ತಿರವಾಗಿ ಪ್ರಯಾಣ ಸೌಕರ್ಯ, ವ್ಯಾಪಾರ ಸೌಕರ್ಯ ಮೊದಲಾದುವು ಬಹುಮಟ್ಟಿಗೆ ಹೆಚ್ಚಲು ಅವಕಾಶವಾಯಿತೆಂದು ಧಾರಳವಾಗಿ ಹೇಳಬಹುದು.

# ೧೫. ಶ್ರೀಮನ್ಮಹಾರಾಜರವರ ಯೂರೋಪ್ ಸಂಚಾರ

ಆಳುವ ಮಹಾಸ್ವಾಮಿಯವರು ಯೂರೋಪಿಗೆ ಪ್ರಯಾಣ ಹೊರಡುವರೆಂಬ ವಾರ್ತೆಯು ೧೯೩೬ನೆಯ ಜೂನ್ ೧೨ನೆಯ ತಾರೀಖಿನ ದಿನ ವರ್ತಮಾನ ಪತ್ರಿಕೆಗಳ ಮೂಲಕ ಸಂಸ್ಥಾನದಲ್ಲೆಲ್ಲ ಏಕಕಾಲದಲ್ಲಿ ಹರಡಿ ಪ್ರಜೆಗಳಲ್ಲಿ ಒಂದು ಬಗೆಯ ಆಶ್ಚರ್ಯವನ್ನೂ, ಆನಂದವನ್ನೂ ಉಂಟುಮಾಡಿತು. ಇದುವರೆಗೆ ಮೈಸೂರು ಅರಸರಲ್ಲಿ ಯಾರೊಬ್ಬರೂ ಇಂತಹ ಪ್ರಯಾಣಕೈಕೊಳ್ಳದಿದ್ದುದೂ, ಪೂರ್ವಾಚಾರಬದ್ಧರಾದ ಪ್ರಭುಗಳವರು ಹಿಂದೆ ಎಂದೂ ಇಲ್ಲದ ಈ ಪ್ರಯಾಣವನ್ನು ನಿಶ್ಚಯಿಸಿದುದೂ ಆಶ್ಚರ್ಯಕ್ಕೆ ಕಾರಣವಾಯಿತು. ಸಮುದ್ರಯಾನಮಾಡಿ ಪಾಶ್ಚಾತ್ಯದೇಶಗಳಿಗೆ ಶ್ರೀಮನ್ಮಹಾರಾಜರವರ ಸವಾರಿಯು ಚಿತ್ತೈಸಿದುದು ಮೈಸೂರು ಸಂಸ್ಥಾನದ ಚರಿತ್ರೆಯಲ್ಲಿ ಗಮನಾರ್ಹವಾದ ಒಂದು ಪ್ರಸಿದ್ಧ ವಿಷಯವಾಗಿದೆ.

ಶ್ರೀಮನ್ಮಹಾರಾಜರವರು ಯೂರೋಪ್ ಸಂಚಾರವನ್ನು ಕೈಕೊಂಡ ವಿಚಾರದಲ್ಲಿ ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಮೈಸೂರು ಪ್ರಜಾಪ್ರತಿನಿಧಿಯ ದಸರಾ ಅಧಿವೇಶನದಲ್ಲಿ (೨೬-೧೦-೩೬) ಅಪ್ಪಣೆಕೊಡಿಸಿದ ಭಾಷಣದಲ್ಲಿ, ಮಹಾಸ್ವಾಮಿಯವರ ಯೂರೋಪ್ ಸಂಚಾರವು ಕೇವಲ ವಿನೋದಾರ್ಥವಾಗಿ ಕೈಕೊಂಡುದಲ್ಲವೆಂದೂ, ಸ್ವಹಿತವನ್ನೂ ಸಂಸ್ಥಾನದ ಹಿತವನ್ನೂ ಮನಸ್ಸಿನಲ್ಲಿಟ್ಟುಕೊಂಡು ತಮ್ಮ ಕರ್ತವ್ಯ ಸಾಧನೆಗಾಗಿ ಯೂರೋಪಿನ ಪ್ರಯಾಣವನ್ನು ಬೆಳಸಿದರೆಂದೂ, ಬೇರೆ ಯಾವುದೋ ಒಂದು ಉದ್ದೇಶವನ್ನಿಟ್ಟುಕೊಂಡು ಅದನ್ನು ಸಾಧಿಸಲು ಪ್ರಭುಗಳು ಯೂರೋಪ್‌ಖಂಡಕ್ಕೆ ಪ್ರಯಾಣ ಹೊರಟಂತೆ ಹರಡಿದ ವಾರ್ತೆಯಲ್ಲಿ ಸ್ವಲ್ಪವೂ ನಿಜವಿಲ್ಲವೆಂದೂ ಕಾರಣವನ್ನು ಸ್ಪಷ್ಟವಾಗಿ ಹೇಳಿರುವರು.

ಆರೋಗ್ಯಲಾಭಕ್ಕಾಗಿಯೂ, ವಿಶ್ರಾಂತಿಗಾಗಿಯೂ ಈ ಪ್ರಯಾಣವನ್ನು ಕೈಕೊಂಡ ಶ್ರೀಮನ್ಮಹಾರಾಜರವರು ೧೯೩೬ನೆಯ ಜೂನ್ ೨೨ನೆಯ ತಾರೀಖು ಮೈಸೂರನ್ನು ಬಿಟ್ಟು ಬೆಂಗಳೂರಿಗೆ ಆಗಮಿಸಿದರು. ಶ್ರೀಮದ್ಯುವರಾಜರವರೂ, ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರೂ, ಇತರ ಪರಿವಾರದವರೂ, ಪ್ರಭುಗಳೊಂದಿಗೆ ಬೊಂಬಾಯಿನಿಂದ ಜೊತೆಯಲ್ಲಿ ಹೊರಡತಕ್ಕುದೆಂದು ನಿಷ್ಕರ್ಷೆಯಾಯಿತು. ನಮ್ಮ ಮಹಾರಾಜರವರು ಸಂಸ್ಥಾನದಿಂದ ಹೊರಟ ಕಾಲದಲ್ಲಿ ಪ್ರಜೆಗಳೆಲ್ಲರೂ ಅವರಿಗೆ ಸುಖಪ್ರಯಾಣವನ್ನು ಕೋರಿ ಮಂಗಳವನ್ನು ಬಯಸಿದರು. ಮಹಾಸ್ವಾಮಿಯವರು ಹೆಚ್ಚಿನ ಆರೋಗ್ಯಲಾಭವನ್ನು ಹೊಂದಿ, ಅಮೂಲ್ಯವಾದ ಹೊಸ ಹೊಸ ಅನುಭವಗಳನ್ನು ಪಡೆದು ಸಂಸ್ಥಾನಕ್ಕೆ ಕ್ಷೇಮವಾಗಿ ಹಿಂದಿರುಗಲೆಂದು ಭಗವಂತನನ್ನು ಸರ್ವರೂ ಪ್ರಾರ್ಥಿಸಿದರು.

ಬೆಂಗಳೂರಿನಿಂದ ಮದರಾಸಿಗೆ ಪ್ರಭುಗಳವರು ಜೂನ್ ೨೩ ನೆಯ ತಾರೀಖು ರಾತ್ರಿ ಪ್ರಯಾಣಮಾಡಿದರು. ಆಗ್ಗೆ ಬೆಂಗಳೂರು ದಂಡಿನ ರೈಲ್ವೆಸ್ಟೇಷನ್ನಿನಲ್ಲಿ ಪ್ರಜಾಮುಖಂಡರನೇಕರು, ಅವರಿಗೆ ರಾಜಭಕ್ತಿಪೂರ್ವಕವಾದ ವಂದನೆಗಳನ್ನರ್ಪಿಸಿದರು. ಮಾರನೆಯ ದಿನ ಪ್ರಾತಃಕಾಲ ಅವರು ಮದರಾಸನ್ನು ತಲುಪಿದರು. ಅಲ್ಲಿ ಮೈಸೂರು

ಸಂಘದವರೂ, ಖಾದೀ ಪ್ರಚಾರಕ ಮಂಡಲಿಯವರೂ, ಇತರ ಪ್ರಮುಖರೂ ಸ್ಟೇಷನ್ನಿನಲ್ಲಿ ಮಹಾಸ್ವಾಮಿಯವರಿಗೆ ಹಾರಾ ತುರಾಯಿಗಳನ್ನರ್ಪಿಸಿ, ಸುಖಪ್ರಯಾಣವನ್ನು ಬಯಸಿದರು. ಅಲ್ಲಿಂದ ಶ್ರೀಮನ್ಮಹಾರಾಜರವರು ಅದೇ ಪ್ರಾತಃಕಾಲ ಹೊರಟು, ೨೬ನೆಯ ತಾರೀಖು ಬೆಳಿಗ್ಗೆ ಬೊಂಬಾಯನ್ನು ತಲುಪಿದರು. ಅಲ್ಲಿಯೂ ಅವರಿಗೆ ಸ್ವಾಗತವಾಯಿತು. ಅಲ್ಲಿದ್ದ ಎರಡು ದಿನಗಳೂ ಪ್ರಭುಗಳ ಸಂತೋಷಕ್ಕಾಗಿ ಅನೇಕ ಕಾರ್ಯಕ್ರಮಗಳು ಏರ್ಪಟ್ಟಿದ್ದವು.

ಜೂನ್ ೨೭ನೆಯ ತಾರೀಖು ರಾತ್ರಿ ಒಂದು ಘಂಟೆಗೆ ಶ್ರೀಮನ್ಮಹಾರಾಜರವರು ಎಸ್. ಎಸ್. ರಾನ್‌ಪುರಾ ಹಡಗಿನಲ್ಲಿ ಪ್ರಯಾಣಮಾಡಿದರು. ಅವರೊಡನೆ ಶ್ರೀಮದ್ಯುವರಾಜರವರೂ, ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರೂ, ಶ್ರೀಯುತರುಗಳಾದ ಜಡಗ್‌ಷಾ, ಮೇಜರ್ ಎ. ಎಂ. ನಬೀಖಾನ್, ವಿ. ಸುಬ್ರಹ್ಮಣ್ಯ ಐಯ್ಯರ್, ಎಸ್. ಗೋಪಾಲರಾವ್, ಡಾ|| ಜೆ. ಎಫ್. ರಾಬಿನ್ಸನ್, ನೀಲಕಂಠರಾವ್, ಡಾ|| ಟಿ. ಬಾಲಕೃಷ್ಣ ಮೊದಲಿಯಾರ್, ಸಿ. ಎ. ಸುಬ್ರಹ್ಮಣ್ಯರಾಜ ಅರಸ್, ಕ|| ಬಿ. ಪಿ. ಕೃಷ್ಣೇಅರಸ್, ಋತ್ವಿಕ್ ರಾಮಾಶಾಸ್ತ್ರಿಗಳು, ಋತ್ವಿಕ್ ನಂಜುಂಡ ಶಾಸ್ತ್ರಿಗಳು ಮೊದಲಾದವರೂ, ಇತರ ಊಳಿಗದವರೂ ಒಟ್ಟು ಮೂವತ್ತೆರಡು ಮಂದಿ ಪ್ರಯಾಣಮಾಡಿದರು.

ರಾನ್‌ಪುರಾ ಹಡಗಿನಲ್ಲಿ ಮಹಾಸ್ವಾಮಿಯವರ ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿಯ ಪೂಜೆಗೂ, ಆಹ್ನಿಕಾದಿಗಳಿಗೂ ಅನುಕೂಲವಾಗಿ ಎಲ್ಲ ಏರ್ಪಾಡುಗಳೂ ನಡೆದಿದ್ದವು. ಹಡಗಿನಲ್ಲಿ ಪ್ರತಿದಿನವೂ ಪ್ರಭುಗಳ ಸಮ್ಮುಖದಲ್ಲಿ ಶ್ರೀಯುತ ವಿ. ಸುಬ್ರಹ್ಮಣ್ಯ ಐಯ್ಯರ್ ಅವರೂ, ಶ್ರೀಯುತ ಋತ್ವಿಕ್ ರಾಮಾಶಾಸ್ತ್ರಿಗಳೂ ತತ್ವಶಾಸ್ತ್ರದ ಹಲವು ಮುಖ್ಯಾಂಶಗಳನ್ನೂ ಇತರ ಪವಿತ್ರ ಗ್ರಂಥಗಳನ್ನೂ ಪಠಿಸಲು ಏರ್ಪಾಡಾಗಿತ್ತು. ಅದೇ ಜಹಜಿನಲ್ಲಿ ಅಡಿಗೆಗಾಗಿ ಪ್ರತ್ಯೇಕ ಸ್ಥಳವನ್ನು ಏರ್ಪಡಿಸಿ, ಕುಡಿಯುವುದಕ್ಕೆ ಗಂಗೆಯನ್ನು ಒದಗಿಸಿದ್ದರು.

ಶ್ರೀಮನ್ಮಹಾರಾಜರವರು ಬೊಂಬಾಯಿನಲ್ಲಿ ಹಡಗನ್ನು ಹತ್ತುವಾಗ ಮೈಸೂರಿನ ಪ್ರಜೆಗಳಿಗೆ ಈ ಕೆಳಗಿನ ಒಂದು ಸಂದೇಶವನ್ನಿತ್ತು ಅವರಿಗೆ ಆನಂದವನ್ನುಂಟುಮಾಡಿದರು.

"ನಮ್ಮ ಪ್ರಜೆಗಳ ಸಂಪೂರ್ಣ ಶುಭಾಶಯಗಳಿಂದಲೂ, ಸುಖ ಪ್ರಯಾಣದ ಶುಭಾಶಂಸನದಿಂದಲೂ ನಾವು ಇದೇ ಮೊಟ್ಟಮೊದಲನೆಯ ಯೂರೋಪ್ ಸಂಚಾರವನ್ನು ಕೈಕೊಂಡಿದ್ದೇವೆ. ಅವರ ಶುಭಾಶಯಗಳಿಗಾಗಿ ನಮ್ಮ ವಂದನೆಗಳು."

ಬೊಂಬಾಯನ್ನು ಬಿಟ್ಟು ಅವರು ಏಡನ್, ಕೆಂಪುಕಡಲು, ಸೂಯೆಸ್ ಕಾಲುವೆ ಇವುಗಳನ್ನು ದಾಟಿ ಮೆಡಿಟರೇನಿಯನ್ ಸಮುದ್ರದ ಮೂಲಕ ಮಾರ್ಸೇಲ್ಸಿಗೆ ಜುಲೈ ೧೦ನೆಯ ತಾರೀಖಿನ ದಿನ ತಲುಪಿದರು. ಅಲ್ಲಿಂದ ಪ್ಯಾರಿಸ್ಸಿಗೆ ಹೋಗಿ, ಅಲ್ಲಿ ನಾಲ್ಕು ದಿನಗಳಿದ್ದು, ತರುವಾಯ ಜುಲೈ ೧೬ನೆಯ ತಾರೀಖು ಲಂಡನ್ನಿಗೆ ಪ್ರಯಾಣಮಾಡಿದರು. ಅದೇ ದಿನ ಪ್ರಭುಗಳು ಲಂಡನ್ನನ್ನು ತಲುಪಿದಾಗ ವಿಕ್ಟೋರಿಯಾ ಸ್ಟೇಷನ್ನಿನಲ್ಲಿ ಅವರನ್ನು ಆದರ ಪೂರ್ವಕವಾಗಿ ಬರಮಾಡಿಕೊಳ್ಳಲು ಲಾರ್ಡ್ ಮತ್ತು ಲೇಡಿ ಗೋಷನ್ ಅವರೂ,

ಸರ್ ಫ್ರೆಡರಿಕ್ ಸೈಕ್ಸ್ ಅವರೂ, ಸರ್ ಹಾರ್‌ಕೋರ್ಟ್‌ಬಟ್ಲರ್ ಅವರೂ, ಸರ್ ಸ್ಟೂಅರ್ಟ್ ಫ್ರೇಸರ್ ಅವರೂ, ಸರ್ ವಿಲಿಯಂ ಬಾರ್ಟನ್ ಅವರೂ, ಇಂಡಿಯ ಆಫೀಸಿನ ಪ್ರತಿನಿಧಿಗಳಾದ ಕ|| ನೀಲ್ ಅವರೂ, ಇತರ ಬ್ರಿಟಿಷ್ ಅಧಿಕಾರಿಗಳೂ, ಅನೇಕ ಮಂದಿ ಭಾರತೀಯರೂ, ಅದರಲ್ಲಿ ಮೈಸೂರಿನವರೂ, ಮತ್ತು ಮೈಸೂರು ಟ್ರೇಡ್ ಕಮಿಷನರವರೂ ಆಗಮಿಸಿದ್ದರು.

ಲಂಡನ್ನಿನಲ್ಲಿ ನಮ್ಮ ಮಹಾರಾಜರವರು ಡಾರ್ಚೆಸ್ಟರ್ ಹೊಟೇಲಿನಲ್ಲಿ ಇಳಿದುಕೊಂಡರು. ಇಲ್ಲಿ ಕೆಲವು ಕೊಠಡಿಗಳನ್ನು ಬಾಡಿಗೆಗೆ ತೆಗೆದುಕೊಂಡು, ಒಂದು ಕೊಠಡಿಯನ್ನು ಶ್ರೀ ಚಾಮುಂಡೇಶ್ವರಿಯ ಪೂಜೆಗೂ, ಒಂದನ್ನು ತಮ್ಮ ಸ್ವಂತ ಉಪಯೋಗಕ್ಕೂ, ಮೂರನೆಯ ಕೊಠಡಿಯನ್ನು ತಮ್ಮನ್ನು ನೋಡಲು ಬಂದವರಿಗೆ ದರ್ಶನಕೊಡುವುದಕ್ಕೂ ಇಟ್ಟುಕೊಂಡರು. ಶ್ರೀಮದ್ಯುವರಾಜರವರೂ, ದಿವಾನರವರೂ ಈ ಭವನದಲ್ಲಿಯೆ ಪ್ರತ್ಯೇಕ ಕೊಠಡಿಗಳಲ್ಲಿ ಬೀಡಾರ ಮಾಡಿದ್ದರು. ಮಹಾಸ್ವಾಮಿಯವರು ಲಂಡನ್ನಿನಲ್ಲಿ ಸಂಚರಿಸುವುದಕ್ಕಾಗಿ ರೋಲ್ಸ್‌ರಾಯ್ಸ್ ಕಾರ್ ಒಂದನ್ನು ಡಾರ್ಚೆಸ್ಟರ್ ಭವನದವರೇ ಕೊಟ್ಟಿದ್ದರು. ಪ್ರಭುಗಳು ಲಂಡನ್ನಿನಲ್ಲಿದ್ದಾಗ್ಗೆ ಹಿಂದಿನ ಮುಖ್ಯಮಂತ್ರಿಗಳಾದ ಮಿ|| ರಾಂಸೆ ಮ್ಯಾಕ್ಡೊನಾಲ್ಡ್ ಅವರೂ, ಇಂಡಿಯದ ಸ್ಟೇಟ್ ಸೆಕ್ರೆಟರಿಗಳಾದ ಮಾರ್ಕ್ವಿಸ್ ಆಫ್ ಜೆಟ್ಲೆಂಡ್ ಅವರೂ, ವೈಕೌಂಟ್ ಹಾಲಿಫಾಕ್ಸ್ ಅವರೂ, ಮಿ|| ವೆಡ್ಜ್‌ವುಡ್‌ಬೆನ್ ಅವರೂ, ಲಾರ್ಡ್ ಹಾರ್ಡಿಂಗ್ ಮತ್ತು ಲಾರ್ಡ್‌ವಿಲ್ಲಿಂಗ್‌ಡನ್ ಅವರೂ ಪ್ರಭುಗಳ ಸಂದರ್ಶನವನ್ನು ಪಡೆದವರಲ್ಲಿ ಕೆಲವರು.

ಜುಲೈ ೨೨ನೆಯ ತಾರೀಖಿನ ದಿನ ಶ್ರೀಮನ್ಮಹಾರಾಜರವರು ಆಗ್ಗೆ ಬ್ರಿಟಿಷ್ ಚಕ್ರವರ್ತಿ ಸಾರ್ವಭೌಮರಾಗಿದ್ದ ಎಂಟನೆಯ ಎಡ್ವರ್ಡ್ ಅವರನ್ನೂ, ೨೭ನೆಯ ತಾರೀಖಿನ ದಿನ ಮೇರಿ ರಾಣಿಯವರನ್ನೂ ಸಂದರ್ಶಿಸಿ, ಮೈಸೂರು ಸಂಸ್ಥಾನದ ಭಕ್ತಿ ವಿಶ್ವಾಸವನ್ನು ನಿವೇದಿಸಿದರು.

ಶ್ರೀಮನ್ಮಹಾರಾಜರವರು ತಾವಿದ್ದ ಡಾರ್ಚೆಸ್ಟರ್ ಹೊಟೇಲಿನಲ್ಲಿಯೇ ತಮ್ಮ ಇಂಗ್ಲಿಷ್ ಸ್ನೇಹಿತರಿಗೂ, ತಮಗೆ ಬೇಕಾದ ಇತರರಿಗೂ ಒಂದು ಸತ್ಕಾರಕೂಟವನ್ನೇರ್ಪಡಿಸಿದರು. ಈ ಕೂಟದಲ್ಲಿ ಬ್ರಿಟಿಷ್ ಪ್ರಜಾಪ್ರಮುಖರನೇಕರೂ, ಮೈಸೂರು ಹಿತಾಕಾಂಕ್ಷಿಗಳಾದ ಭಾರತೀಯರೂ ಭಾಗವಹಿಸಿದ್ದರು. ಆಹ್ವಾನಿತರನ್ನೆಲ್ಲ ಶ್ರೀಮದ್ಯುವರಾಜರವರೂ, ದಿವಾನರವರೂ ಸ್ವಾಗತಿಸಿ, ಅವರಲ್ಲಿ ಕೆಲವರನ್ನು ಮಹಾಸ್ವಾಮಿಯವರಿಗೆ ಪರಿಚಯಮಾಡಿಕೊಟ್ಟರು. ಅತಿಥಿಗಳೆಲ್ಲರೂ ಪ್ರಭುಗಳ ಸರಳಸ್ವಭಾವ, ಸದಾಚಾರ, ಸೌಜನ್ಯತೆ ಮೊದಲಾದವುಗಳನ್ನು ಕಂಡು ಆನಂದಪಟ್ಟರು.

ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಡಾರ್ಚೆಸ್ಟರ್‌ಭವನದಲ್ಲಿ ಆಗಸ್ಟ್ ೬ನೆಯ ತಾರೀಖಿನ ದಿನ ಒಂದು ಸತ್ಕಾರಕೂಟವನ್ನೇರ್ಪಡಿಸಿದರು. ಈ ಕೂಟದಲ್ಲಿ ಪ್ರಭುಗಳವರು ಭಾಗವಹಿಸಿ, ಆಹೂತರಾಗಿ ಬಂದಿದ್ದ ಪ್ರಮುಖ ಬ್ರಿಟಿಷರನ್ನೂ ಮತ್ತು ಮಾನ್ಯ ಮೈಸೂರಿನ ಪ್ರಜೆಗಳನ್ನೂ ಸಂತೋಷಪಡಿಸಿದರು.

ನಮ್ಮ ಮಹಾರಾಜರವರು ಲಂಡನ್ನಿನಲ್ಲಿದ್ದಾಗ್ಗೆ ಉಪಾಕರ್ಮವು ಸಂಧಿಸಿತು. ಇದನ್ನು ವಿಧಿವತ್ತಾಗಿ ಆಚರಿಸಲು ಲಂಡನ್ನಿಗೆ ಇಪ್ಪತ್ತು ಮೈಲಿಗಳ ದೂರದಲ್ಲಿ ಥೆಂಸ್ ನದಿಯ ತೀರದಲ್ಲಿರುವ 'ಮೇಡನ್‌ಹೆಡ್' ಎಂಬಲ್ಲಿ ಎರಡು ಕಟ್ಟಡಗಳನ್ನು ಬಾಡಿಗೆಗೆ ತೆಗೆದುಕೊಂಡರು. ಉಪಾಕರ್ಮ ವಿಧಿಗಾಗಿ ಪ್ರಭುಗಳವರೂ, ಅವರ ಹಿಂದು ಪರಿವಾರದವರೂ ಅಲ್ಲಿಗೆ ಹೋಗಿ, ಕಾರ್ಯವನ್ನು ಸಾಂಗವಾಗಿ ನೆರವೇರಿಸಿಕೊಂಡು ಹಿಂದಿರುಗಿದರು. ಈ ಉಪಾಕರ್ಮದ ವಿವರವನ್ನು ಕುರಿತು ಅನೇಕ ಲಂಡನ್ನಿನ ಪತ್ರಿಕೆಗಳ ಸಂಪಾದಕರು ವಿಚಿತ್ರ ಲೇಖನಗಳನ್ನು ಪ್ರಕಟಿಸಿದರು.

ಆಗಸ್ಟ್ ೮ನೆಯ ತಾರೀಖಿನ ದಿನ ಪ್ರಭುಗಳವರು ಲಂಡನ್ನಿನಿಂದ ಹೊರಟು, ಇಂಗ್ಲೆಂಡಿನ ಗ್ರಾಮಪ್ರದೇಶಗಳಲ್ಲಿಯೂ, ಸ್ಕಾಟ್ಲೆಂಡಿನಲ್ಲಿಯೂ ಸಂಚಾರಮಾಡಲು ಮೊದಲುಮಾಡಿದರು. ಇವರ ಸ್ಕಾಟ್ಲೆಂಡ್ ಪ್ರವಾಸಕ್ಕಾಗಿ ಒಂದು ಸ್ಪೆಷಲ್ ರೈಲನ್ನು ಸಿದ್ಧಗೊಳಿಸಿ, ಅದಕ್ಕೆ 'ಮೈಸೂರು ಸ್ಪೆಷಲ್' ಎಂದು ಹೆಸರಿಟ್ಟರು. ಶ್ರೀಮನ್ಮಹಾರಾಜರವರು ಈ ರೈಲಿನಲ್ಲಿಯೇ ಸದಾಕಾಲದಲ್ಲಿ ಇರಲು ಸಮಸ್ತ ಸೌಕರ್ಯಗಳನ್ನು ಒದಗಿಸಲಾಗಿತ್ತು. ಲಂಡನ್ನಿನಿಂದ ಅವರು ಈ ರೈಲಿನಲ್ಲಿ ಹೊರಟು ಟೋರ್ಕಿಗೆ ಪ್ರಯಾಣಮಾಡಿದರು. ಅಲ್ಲಿ ರೈಲಿನಿಂದಿಳಿದು ಮೋಟಾರಿನಲ್ಲಿ ಊರನ್ನೆಲ್ಲಾ ಸುತ್ತಿ, ಪ್ರಾಣಿ ಪ್ರದರ್ಶನಾಲಯಕ್ಕೂ, ವಿಜ್ಞಾನಶಾಸ್ತ್ರ ಪ್ರದರ್ಶನಾಲಯಕ್ಕೂ ದರ್ಶನಕೊಟ್ಟರು.

ಟೋರ್ಕಿಯಿಂದ ನಮ್ಮ ಮಹಾರಾಜರವರು ಕೆಸ್‌ವಿಕ್‌ಗೆ ಅದೇ ರೈಲಿನಲ್ಲಿ ಪ್ರಯಾಣಮಾಡಿ, ಅಲ್ಲಿಂದ ಡರ್‌ವೆಂಟ್‌ವಾಟರಿಗೆ ಮೋಟಾರಿನಲ್ಲಿ ಹೋಗಿ, ಅಲ್ಲಿನ ಪ್ರದರ್ಶನಾಲಯವನ್ನು ಸಂದರ್ಶಿಸಿದರು. ಆ ಪ್ರದರ್ಶನಾಲಯದಲ್ಲಿ ಕ್ಯೂರೇಟರಾದ ವಿಲಿಯಂ ಡಾವೆಯವರು ಪ್ರಸಿದ್ಧವಾದ ಸ್ಕಾಟಿಷ್‌ರಾಕ್ ಬ್ಯಾಂಡನ್ನು ಬಾರಿಸಿದರು. ಪ್ರಭುಗಳವರು ಇದನ್ನು ಕೇಳಿ ಸಂತೋಷಪಟ್ಟು, ಅನಂತರ ಅನೇಕ ಪಾರ್ಕುಗಳನ್ನೂ, ಪ್ರಸಿದ್ಧ ಜಲಾಶಯಗಳನ್ನೂ ನೋಡಿ, ಕೆಸ್‌ವಿಕ್‌ನಿಂದ ಓಬಾನ್‌ಗೆ ರೈಲಿನಲ್ಲಿ ಬಂದು, ಆ ಸುಂದರ ಪ್ರದೇಶವನ್ನು ನೋಡಿ, ಮುಂದಕ್ಕೆ ಅಬರ್‌ಫೀಲ್ಡಿಗೆ ಪ್ರಯಾಣಮಾಡಿದರು. ಅಲ್ಲಿಂದ ಹೊರಟು ಮಹಾಸ್ವಾಮಿಯವರು ಇನ್‌ವರ್ನೆಸ್, ಎಡಿನ್‌ಬರೋ ಮತ್ತು ಕಾರ್ಲೆಸ್ಲಿ ನಗರಗಳಿಗೆ ಭೇಟಿಕೊಟ್ಟರು. ಸ್ಕಾಟ್ಲೆಂಡಿನ ಸಂಚಾರದಿಂದ ಅವರಿಗೆ ಅಪರಿಮಿತವಾದ ಆನಂದ ಉಂಟಾದುದಲ್ಲದೆ, ಅವರ ಆರೋಗ್ಯವೂ ಬಹಳಮಟ್ಟಿಗೆ ಉತ್ತಮಗೊಂಡಿತು.

ಶ್ರೀಮನ್ಮಹಾರಾಜರವರು ಸ್ಕಾಟ್ಲೆಂಡಿನ ಪ್ರಯಾಣವನ್ನು ಮುಗಿಸಿಕೊಂಡು ೧೬ನೆಯ ತಾರೀಖು ಲಂಡನ್ನಿಗೆ ಹಿಂದಿರುಗಿದರು. ಆಗ ಬ್ರಿಟಿಷ್ ನೌಕಾ ಇಲಾಖೆಯವರು ತಮ್ಮ ದಳಗಳನ್ನು ಪರಿಶೀಲನೆಮಾಡಲು ಅವರನ್ನು ಆಹ್ವಾನಿಸಿದರು. ಅವರ ಆಹ್ವಾನವನ್ನು ಗೌರವಿಸಿ ಮಹಾಸ್ವಾಮಿಯವರು ನೌಕಾದಳವನ್ನು ನೋಡಿಕೊಂಡು ಬಂದರು. ಹಾಗೆಯೇ ಅವರು ಸಬ್‌ಮೆರೈನ್ ವ್ಯವಸ್ಥೆಯನ್ನು ನೋಡಿದುದಲ್ಲದೆ, ಸಬ್‌ಮೆರೈನ್‌ನಲ್ಲಿ ಕುಳಿತು ಬಹಳಹೊತ್ತು ಓಡಾಡಿ, ಆಧುನಿಕ ವಿಜ್ಞಾನದ ಶಕ್ತಿಯನ್ನು ವಿಶೇಷವಾಗಿ ಪ್ರಶಂಸಿಸಿದರು.

ಇಷ್ಟರಲ್ಲಿ ಪ್ರಭುಗಳವರು ಬರ್ಲಿನ್ನಿಗೆ ವಿಮಾನದಲ್ಲಿ ಪ್ರಯಾಣಮಾಡಬೇಕೆಂಬುದಾಗಿ

ನಿರ್ಧರಿಸಿದರು. ಕೂಡಲೆ ಇದಕ್ಕೆ ಏರ್ಪಾಡು ಮಾಡಲಾಯಿತು. ಲಂಡನ್ನಿನಿಂದ ಬರ್ಲಿನ್ನಿಗೆ ಅವರು ೧೯ನೆಯ ತಾರೀಖು ಸ್ಪೆಷಲ್ ವಿಮಾನದಲ್ಲಿ ಹೊರಡುವುದೆಂದು ಗೊತ್ತಾಯಿತು. ಅವರೊಡನೆ ದಿವಾನ್ ಸರ್ ಮಿರ್ಜಾ ಅವರೂ, ಇತರ ಹನ್ನೆರಡು ಮಂದಿಯೂ ಹೋಗಬೇಕೆಂದೂ, ಮಿಕ್ಕವರೆಲ್ಲರೂ ಭೂಮಾರ್ಗವಾಗಿ ಪ್ರಯಾಣ ಮಾಡಬೇಕೆಂದೂ ವ್ಯವಸ್ಥೆಯಾಯಿತು.

ನಿಶ್ಚಿತವಾದಂತೆ ಶ್ರೀಮನ್ಮಹಾರಾಜರವರು ೧೯ನೆಯ ತಾರೀಖು ಪ್ರಾತಃಕಾಲ ಕ್ರಾಯ್‌ಡನ್ ಏರೋಡ್ರೋಮಿನಲ್ಲಿ ಪ್ರಯಾಣಕ್ಕಾಗಿ ಬಂದರು. ಅವರನ್ನು ಬೀಳ್ಕೊಡಲು ಶ್ರೀಮದ್ಯುವರಾಜರವರೂ, ಮೈಸೂರು ಟ್ರೇಡ್‌ಕಮಿಷನರವರಾದ ರಾಜಸೇವಾಸಕ್ತ ಶ್ರೀಯುತ ಟಿ. ವಿ. ಎ. ಈಶ್ವರನ್ ಅವರೂ, ಇತರರೂ ಆಗಮಿಸಿದ್ದರು. ಪ್ರಭುಗಳವರು ಹಸನ್ಮುಖಿಗಳಾಗಿದ್ದು 'ಸ್ಪೆಕ್‌ಸ್ಕೈ' ಎಂಬ ವಿಮಾನದಲ್ಲಿ ಲಂಡನ್ನಿನಿಂದ ಬರ್ಲಿನ್ನಿಗೆ ಹೊರಟು, ಬರ್ಲಿನ್ನಿನ ಟೆಂಪಲ್ ಹೋಪ್ ಏರೋಡ್ರೋಮಿಗೆ ೧೯ನೆಯ ತಾರೀಖು ಸಾಯಂಕಾಲ ತಲುಪಿದರು. ನಮ್ಮ ಮಹಾರಾಜರವರು ವಿಮಾನದಲ್ಲಿ ಪ್ರಯಾಣಮಾಡಿದುದು ಇದೇ ಮೊದಲನೆಯ ಸಾರಿ.

ಇವರನ್ನು ಸ್ವಾಗತಿಸಲು ಜರ್ಮನ್ ಸರಕಾರದ ಪ್ರಮುಖ ಅಧಿಕಾರಿಗಳೂ ಇತರರೂ ಆಗಮಿಸಿದ್ದರು. ಬರ್ಲಿನ್ನಿನಲ್ಲಿ ಪ್ರಭುಗಳವರು ಏಡ್ಲಾನ್ ಹೊಟೇಲಿನಲ್ಲಿ ಇಳಿದುಕೊಂಡರು. ಅವರು ಜರ್ಮನಿಯ ಕೆಲವು ಪ್ರದೇಶಗಳನ್ನು ನೋಡಿಕೊಂಡು ಬಂದುದಲ್ಲದೆ, ಇಲ್ಲಿ ಕೈಗಾರಿಕೆಯ ಅಭಿವೃದ್ಧಿ ವಿಚಾರಗಳನ್ನು ತಿಳಿಯಲು ಅನೇಕ ಕಾರ್ಖಾನೆಗಳಿಗೆ ಭೇಟಿಯಿತ್ತು, ವಿದ್ಯುಚ್ಛಕ್ತಿ ಮತ್ತು ಇತರ ವೈಜ್ಞಾನಿಕ ವಿಷಯಗಳ ವ್ಯವಸ್ಥೆಗಳನ್ನು ನೋಡಿ ಬಹಳವಾಗಿ ಶ್ಲಾಘಿಸಿದರು. ಇಲ್ಲಿರುವಾಗ ಮಹಾಸ್ವಾಮಿಯವರು ಜಿಪ್ಸಿ ಸಂಗೀತವನ್ನು ಕೇಳಿ ವಿಶೇಷ ಸಂತೋಷಪಟ್ಟರು.

ಬರ್ಲಿನ್ನಿನಲ್ಲಿ ನಾಲ್ಕೈದು ದಿನಗಳಿದ್ದು ಪ್ರಭುಗಳವರು ಬುಡಾಪೆಸ್ಟಿಗೆ ಪ್ರಯಾಣಮಾಡಿದರು. ಬುಡಾಪೆಸ್ಟಿನಲ್ಲಿ ಅವರು ಅತ್ಯಂತ ವೈಭವಯುತವಾದ ಒಂದು ಹೊಟೇಲಿನಲ್ಲಿ ಇಳಿದುಕೊಂಡರು. ಅಲ್ಲಿಯ ಜನರು ಮಹಾಸ್ವಾಮಿಯವರನ್ನು ನೋಡಲು ಉತ್ಸುಕರಾಗಿ, ತಂಡೋಪತಂಡವಾಗಿ ಬಂದು ಅವರ ದರ್ಶನವನ್ನು ತೆಗೆದುಕೊಂಡು ಹೋಗುತ್ತಿದ್ದರು. ಬುಡಾಪೆಸ್ಟಿನಿಂದ ಅವರು ವಿಯನ್ನಾವಿಗೆ ರೈಲಿನಲ್ಲಿ ಪ್ರಯಾಣಮಾಡಿದರು. ಇಲ್ಲಿಯೂ ಅವರಿಗೆ ಅಪೂರ್ವ ಸ್ವಾಗತವು ದೊರೆಯಿತು. ಇಲ್ಲಿ ಅವರು ಎರಡು ದಿನಗಳಿದ್ದು, ಆಸ್ಟ್ರಿಯದ ಪರ್ವತ ಪ್ರದೇಶಗಳಲ್ಲಿ ಸಂಚರಿಸಿದರು. ತರುವಾಯ ಪ್ರಭುಗಳು ಜ್ಯೂರಿಚ್ಚಿಗೆ ಪ್ರಯಾಣಮಾಡಿದರು. ಅಲ್ಲಿ ಲಾಸೇನ್ ನಗರದಲ್ಲಿಯೂ, ಆಲ್ಪ್ಸ್‌ಪರ್ವತ ಪ್ರದೇಶಗಳಲ್ಲಿಯೂ ಪ್ರವಾಸ ಮುಗಿಸಿಕೊಂಡು ಸೆಪ್ಟಂಬರು ೧೭ನೆಯ ತಾರೀಖು ಮಾರ್ಸೇಲ್ಸನ್ನು ತಲುಪಿದರು.

ಇಲ್ಲಿಗೆ ನಮ್ಮ ಮಹಾರಾಜರವರ ಯೂರೋಪ್ ಸಂಚಾರವು ಮುಗಿಯಿತು. ಮಾರ್ಸೇಲ್ಸ್‌ನಿಂದ ೧೯ನೆಯ ತಾರೀಖು ಎಸ್. ಎಸ್. ಸ್ಟ್ರಾತ್‌ಮೋರ್ ಹಡಗಿನಲ್ಲಿ

ಇಂಡಿಯ ದೇಶಕ್ಕೆ ಪ್ರಯಾಣಮಾಡಲು ಎಲ್ಲವೂ ಸಿದ್ಧವಾಯಿತು. ಈ ತಾರೀಖಿಗೆ ಸರಿಯಾಗಿ ಶ್ರೀಮದ್ಯುವರಾಜರವರೂ ಇತರರೂ ಈ ಹಡಗಿಗೆ ಬಂದು ಸೇರಿದರು. ಮಾರ್ಸೇಲ್ಸ್‌ನಲ್ಲಿ ವಿನಾಯಕನ ಚತುರ್ಥಿ ವ್ರತವನ್ನು ಮುಗಿಸಿಕೊಂಡು, ಅಲ್ಲಿಂದ ೧೯ನೆಯ ತಾರೀಖು ಹೊರಟು, ಸೂಯಸ್ ಕಾಲುವೆಯನ್ನೂ ಕೆಂಪು ಸಮುದ್ರವನ್ನೂ ದಾಟಿ, ಏಡನ್ನಿನ ಮಾರ್ಗವಾಗಿ ಮಹಾಸ್ವಾಮಿಯವರು ತಮ್ಮ ಪರಿವಾರದೊಂದಿಗೆ ಸೆಪ್ಟಂಬರು ೨೯ನೆಯ ತಾರೀಖು ಬೊಂಬಾಯನ್ನು ತಲುಪಿದರು.

ಬೊಂಬಾಯಲ್ಲಿ ಶ್ರೀಮನ್ಮಹಾರಾಜರವರನ್ನು ಪ್ರಿನ್ಸ್ ಜಯಚಾಮರಾಜ ಒಡೆಯರವರೂ, ಶ್ರೀಯುತ ಸರ್. ಎಂ. ವಿಶ್ವೇಶ್ವರಯ್ಯನವರೂ, ರಾಜ ಮಂತ್ರಪ್ರವೀಣ ಶ್ರೀಯುತ ಎಸ್. ಪಿ. ರಾಜಗೋಪಾಲಾಚಾರಿಯವರೂ, ಮೈಸೂರು ಅಸೋಸಿಯೇಷನ್ನಿನವರೂ ಇತರರೂ ಸ್ವಾಗತಿಸಿದರು. ಶ್ರೀಮನ್ಮಹಾರಾಜರವರು ತಮ್ಮ ಪ್ರವಾಸದಲ್ಲಿ ಸಹಕರಿಸಿದ ಸರ್ವರಿಗೂ ಕೃತಜ್ಞತೆಯನ್ನು ಪ್ರದರ್ಶಿಸಿದರು. ಅಲ್ಲಿಂದ ಅವರು ಗುಂತಕಲ್ ಮಾರ್ಗವಾಗಿ ಬೆಂಗಳೂರಿಗೆ ೧೯೩೬ನೆಯ ಅಕ್ಟೋಬರು ೨ನೆಯ ತಾರೀಖು ಆಗಮಿಸಿದರು.

ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರ ಮೇಲ್ವಿಚಾರಣೆಯಲ್ಲಿ ಪ್ರಭುಗಳ ಯೂರೋಪ್ ಪ್ರವಾಸವು ಸುಗಮವಾಗಿ ನಡೆಯಿತು. ಶ್ರೀಮನ್ಮಹಾರಾಜರವರೂ ಇತರರೂ ಆರೋಗ ದೃಢಕಾಯರಾಗಿ ಶ್ರೀಚಾಮುಂಡೇಶ್ವರಿಯ ಕೃಪೆಯಿಂದ ಸ್ವದೇಶಕ್ಕೆ ಹಿಂದಿರುಗಿದುದು ಸಂಸ್ಥಾನದ ಪ್ರಜೆಗಳೆಲ್ಲರಿಗೂ ಆನಂದವನ್ನುಂಟುಮಾಡಿತು. ಆದರ್ಶ ಪ್ರಭುಗಳಾಗಿರುವ ಮಹಾಸ್ವಾಮಿಯವರ ಕೃಪಾಮಯವಾದ ಆಳ್ವಿಕೆಯು ಚಿರಕಾಲ ವರ್ಧಿಸಲೆಂದೂ, ಅವರು ಪರಾಂಬರಿಸಿಕೊಂಡು ಬಂದಿರುವ ಹೊಸ ಹೊಸ ಸಂಗತಿಗಳು ಮತ್ತು ಅವರು ಪಡೆದಿರುವ ಹೊಸ ಹೊಸ ಅನುಭವಗಳು ಮುಂದೆ ಸಂಸ್ಥಾನದ ಅಭ್ಯುದಯವನ್ನು ಹೆಚ್ಚಿಸಲೆಂದೂ, ಸಮಸ್ತ ಪ್ರಜೆಗಳೂ ಬಯಸುತ್ತ ಪ್ರಭುಗಳ ಶ್ರೇಯಃಪ್ರಾರ್ಥನೆ ಮಾಡುತ್ತಿರುವರು.

# ೧೬. ಶ್ರೀಮದ್ಯುವರಾಜರವರು ಮತ್ತು ಯುವರಾಜ ಕುಮಾರರು

ಆಳುವ ಮಹಾಸ್ವಾಮಿಯವರ ತಮ್ಮಂದಿರಾದ ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಶ್ರೀ ಚಾಮರಾಜೇಂದ್ರ ಒಡೆಯರವರ ದ್ವಿತೀಯ ಪುತ್ರರು. ಇವರು ೧೮೮೮ ನೆಯ ಜೂನ್ ತಿಂಗಳಲ್ಲಿ ಜನಿಸಿದರು. ಇವರಿಗೆ ಇನ್ನೂ ಆರು ವರ್ಷ ವಯಸ್ಸಾಗಿದ್ದಾಗ ಇವರ ತಂದೆಯವರು ಕಾಲವಾದರು. ಶ್ರೀಮದ್ಯುವರಾಜರವರಿಗೂ, ಶ್ರೀಮನ್ಮಹಾರಾಜರವರ ಜೊತೆಯಲ್ಲೆ ಖಾಸ್ ಬಂಗಲೆಯಲ್ಲಿಯೂ, ರಾಯಲ್ ಸ್ಕೂಲಿನಲ್ಲಿಯೂ ವಿದ್ಯಾಭ್ಯಾಸ ನಡೆಯಿತು. ಇವರ ಶಿಕ್ಷಣಕ್ಕಾಗಿಯೇ ಸಮರ್ಥರಾದ ಉಪಾಧ್ಯಾಯರನ್ನು ನೇಮಿಸಿದ್ದರು.

ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ೧೯೦೮ರಲ್ಲಿ ಜಪಾನ್ ದೇಶಕ್ಕೆ ಹೋಗಿದ್ದರು. ಇವರಿಗೆ ೧೯೧೦ರಲ್ಲಿ ದಳವಾಯಿ ದೇವರಾಜ ಅರಸರ ಮಗಳನ್ನು ತಂದು ವಿವಾಹವಾಯಿತು. ತರುವಾಯ ಇವರು ೧೯೧೩ರಲ್ಲಿ ಯೂರೋಪ್ ಸಂಚಾರ ಹೊರಟು, ಅಲ್ಲಿ ವಿಶ್ರಾಂತಿರಹಿತರಾಗಿ ಕೆಲಸ ಮಾಡುತ್ತ ಅನೇಕ ಸಂಸ್ಥೆಗಳಿಗೆ ಭೇಟಿಕೊಟ್ಟು ಆ ದೇಶದಲ್ಲಿ ನಾನಾ ಉದ್ಯಮಗಳನ್ನು ಪರಿಶೀಲಿಸಿದರು. ಅಲ್ಲಿಂದ ಹಿಂದಿರುಗಿದ ಮೇಲೆ ಶ್ರೀಮದ್ಯುವರಾಜರವರು ನಮ್ಮ ಸಂಸ್ಥಾನದ ಮಂತ್ರಾಲೋಚನ ಸಭೆಯ ವಿಶೇಷ ಸದಸ್ಯರಾಗಿದ್ದುಕೊಂಡು ರಾಜ್ಯದಾಡಳಿತದಲ್ಲಿ ಸಹಕರಿಸಿದರು. ಪುನಃ ಇವರು ೧೯೨೦ರಲ್ಲಿ ಯೂರೋಪ್ ಪ್ರವಾಸ ಹೊರಟು, ತಮ್ಮ ಅನುಭವವನ್ನು ಹೆಚ್ಚಿಸಿಕೊಂಡರು. ಅದರಿಂದೀಚೆಗೆ ಅನೇಕ ಸಲ ಇವರು ಪರದೇಶ ಸಂಚಾರಮಾಡಿ ವಿಶೇಷ ಜ್ಞಾನಾರ್ಜನೆಯನ್ನು ಮಾಡಿದ್ದಾರೆ. ಆಳುವ ಮಹಾಪ್ರಭುಗಳು ೧೯೩೬ರಲ್ಲಿ ಯೂರೋಪಿಗೆ ಪ್ರಯಾಣ ಹೊರಟಾಗಲೂ ಅವರೊಂದಿಗೆ ತಾವೂ ಹೋಗಿ, ಅಲ್ಲಿ ಅನೇಕ ಪ್ರಮುಖರ ಪರಿಚಯನ್ನು ತಮ್ಮ ಅಣ್ಣಂದಿರಿಗೆ ಮಾಡಿಕೊಟ್ಟರು.

ಶ್ರೀಮದ್ಯುವರಾಜರವರು ಮೈಸೂರು ಸಂಸ್ಥಾನದಲ್ಲಿ ಅನೇಕ ಮಹಾ ಸಮ್ಮೇಳನಗಳಲ್ಲಿಯೂ, ಪ್ರದರ್ಶನ ಮಹೋತ್ಸವಗಳಲ್ಲಿಯೂ ಅಧ್ಯಕ್ಷತೆಯನ್ನು ವಹಿಸಿ, ಸಂಸ್ಥಾನಾಭಿವೃದ್ಧಿಗೆ ಸಹಾಯಮಾಡಿರುವುದಲ್ಲದೆ, ಅನೇಕ ಸಂಸ್ಥೆಗಳಿಗೆ ಪ್ರೋತ್ಸಾಹ ಕೊಡುತ್ತಲಿದ್ದಾರೆ. ಇವರು ಚೀಫ್ ಸ್ಕೌಟಾಗಿದ್ದುಕೊಂಡು ನಮ್ಮ ಸ್ಕೌಟುಗಳು ಶ್ರದ್ಧೆಯಿಂದ ಕೆಲಸಮಾಡುವಂತೆ ಹುರಿದುಂಬಿಸುತ್ತಿರುವುದೇ ಈ ಸಂಸ್ಥಾನದಲ್ಲಿ ಸ್ಕೌಟ್ ಚಳುವಳಿಯು ವಿಶೇಷ ಮುಂದುವರಿದಿರುವುದಕ್ಕೆ ಕಾರಣವಾಗಿದೆ. ಇವರಿಗಿರುವ ಮೇಧಾಶಕ್ತಿ, ದೇಶವಾತ್ಸಲ್ಯ, ಭ್ರಾತೃಪ್ರೇಮ ಮೊದಲಾದುವು ಅಸದೃಶವಾದುವು.

ಆಳುವ ಮಹಾಸ್ವಾಮಿಯವರ ಕಾಲದಲ್ಲಿ ಸಂಸ್ಥಾನದ ನಾನಾ ಕಡೆಗಳಲ್ಲಿ ಸಹಕಾರ ಸಂಘಗಳು ಸ್ಥಾಪಿತವಾಗಿ, ಅನೇಕ ಸಂಘಗಳು ತೃಪ್ತಿಕರವಾಗಿ ಕೆಲಸಮಾಡುತ್ತಿವೆ. ಈ ಸಂಘಗಳು ಹೆಚ್ಚು ಸ್ಪರ್ಧೆಯಿಂದ ಕೆಲಸಮಾಡುವಂತೆ ಶ್ರೀಮದ್ಯುವರಾಜರವರು ಪ್ರತಿ ವರ್ಷವೂ ಬೆಳ್ಳಿಯ ಗುರಾಣಿಯನ್ನು ದಯೆಪಾಲಿಸುತ್ತಿರುವರು. ಇಷ್ಟೇ ಅಲ್ಲದೆ, ಇವರು

ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ಅಧ್ಯಕ್ಷರಾಗಿಯೂ, ಮೈಸೂರು ವಿಶ್ವವಿದ್ಯಾಪೀಠದ ಪ್ರೊ.ಛಾನ್‌ಸೆಲರಾಗಿಯೂ ಇರುವರು. ಇವರಿಗೆ ಸಾರ್ವಭೌಮ ಸರಕಾರದವರು ೧೯೧೫ರಲ್ಲಿ ಜೆ. ಸಿ. ಐ. ಇ. ಎಂಬ ಪ್ರಶಸ್ತಿಯನ್ನು ಕೊಟ್ಟರು.

ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೆ ೧೯೧೯ನೆಯ ಜುಲೈ ೧೮ನೆಯ ತಾರೀಖು ಪುತ್ರೋತ್ಸವವಾಯಿತು. ಇವರೇ ಶ್ರೀ ಜಯಚಾಮರಾಜ ಒಡೆಯರವರು*. ಇವರ ಜನನದಿಂದ ಮೈಸೂರಿನ ಪ್ರಜೆಗಳೆಲ್ಲರಿಗೂ ಅಮಿತಾನಂದ ಉಂಟಾಯಿತು. ಶ್ರೀಮದ್ಯುವರಾಜರವರಿಗೆ ಮೂವರು ಹೆಣ್ಣುಮಕ್ಕಳಿದ್ದಾರೆ. ಇವರಲ್ಲಿ ಹಿರಿಯವರೇ ವಿಜಯಲಕ್ಷಮ್ಮಣ್ಣಿಯವರು.

ಬಾಲ್ಯದಲ್ಲಿ ಶ್ರೀಜಯಚಾಮರಾಜ ಒಡೆಯರವರು ರಾಯಲ್‌ಸ್ಕೂಲ್ ಎಂಬ ಅರಮನೆಯ ವಿಶೇಷ ಶಿಕ್ಷಣ ಮಂದಿರದಲ್ಲಿ ೧೦-೧೨ ಮಂದಿ ಇತರ ಬಾಲಕರೊಂದಿಗೆ ತರಪೇತು ಹೊಂದಿ ವ್ಯಾಯಾಮ, ಕಸರತ್ತುಗಳಲ್ಲಿಯೂ, ಇತರ ವಿಧವಾದ ಆಟಪಾಟಗಳಲ್ಲಿಯೂ, ಪ್ರತಿಭಾಸಂಪನ್ನರಾಗಿ ರಾಜಪುತ್ರರ ರೀವಿಗೂ, ಯಶಸ್ಸಿಗೂ ತಕ್ಕಂತೆ ಬೆಳೆದಿದ್ದಾರೆ. ಇವರು ಎಸ್. ಎಸ್. ಎಲ್. ಸಿ. ಪರೀಕ್ಷೆಯವರೆಗೆ ಪ್ರತ್ಯೇಕವಾಗಿ ವ್ಯಾಸಂಗ ಮಾಡುತ್ತಿದ್ದು ಅನಂತರ ಸಾಮಾನ್ಯ ವಿದ್ಯಾರ್ಥಿಗಳಂತೆ ಕಾಲೇಜನ್ನು ಸೇರಿದರು. ಅಲ್ಲಿ ತರಗತಿಯ ಇತರ ಬಾಲಕರೊಂದಿಗೆ ಇವರ ವಿದ್ಯಾಭ್ಯಾಸವೂ ಮುಂದುವರಿಯಿತು. ಇದರಿಂದ ಇವರು ಇತರರ ಕಷ್ಟಸುಖಗಳನ್ನು ಚಿಕ್ಕಂದಿನಿಂದಲೂ ಅರಿಯುವುದಕ್ಕೆ ಅವಕಾಶವಾಯಿತು. ಇವರು ೧೯೩೮ರಲ್ಲಿ ಮೈಸೂರು ವಿಶ್ವ ವಿದ್ಯಾಪೀಠದ ಬಿ. ಎ. ಡಿಗ್ರಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮೈಸೂರು ಸಂಸ್ಥಾನದ ರಾಜಮನೆತನದಲ್ಲಿ ವಿಶ್ವವಿದ್ಯಾಪೀಠದ ಪ್ರಶಸ್ತಿಯನ್ನು ಪಡೆದವರಲ್ಲಿ ಶ್ರೀ ಜಯಚಾಮರಾಜ ಒಡೆಯರವರೇ ಮೊದಲನೆಯವರು.

೧೯೩೭ನೆಯ ಏಪ್ರಿಲ್ ತಿಂಗಳಲ್ಲಿ ಶ್ರೀ ಜಯಚಾಮರಾಜ ಒಡೆಯರವರು, ಆಗ ಸಂಸ್ಥಾನದ ಸೀನಿಯರ್ ಸರ್ಜನ್‌ರಾಗಿದ್ದ ಶಸ್ತ್ರ ವೈದ್ಯ ಪ್ರವೀಣ ಶ್ರೀ ಡಾ|| ಎಸ್. ಸುಬ್ಬರಾಯರೊಡನೆ ಮಿತಪರಿವಾರದೊಂದಿಗೆ ಜಪಾನ್ ಮತ್ತು ಪೌರ್ವಾತ್ಯ ದೇಶಗಳಲ್ಲಿ ಸಂಚರಿಸಿದರು. ಇವರು ಜಪಾನಿನ ರಾಜಧಾನಿಯಾದ ಟೋಕಿಯೊ ಪಟ್ಟಣದಲ್ಲಿದ್ದಾಗ್ಗೆ ಇಂಪೀರಿಯಲ್ ಹೊಟೇಲಿನಲ್ಲಿ ಬೀಡಾರ ಮಾಡಿದ್ದರು. ಅಲ್ಲಿ ಮೈಸೂರು ವಿದ್ಯಾರ್ಥಿಗಳಿಗೂ ಇತರ ಮಹನೀಯರಿಗೂ ಭೇಟಿಕೊಟ್ಟು, ಟೋಕಿಯೊದಲ್ಲಿರುವ ಕಾರ್ಖಾನೆಗಳನ್ನೆಲ್ಲ ನೋಡಿ, ಅನೇಕ ವಿಷಯಗಳನ್ನು ಮನದಟ್ಟುಮಾಡಿಕೊಂಡರು, ಯುವರಾಜ ಕುಮಾರರನ್ನು ಸಂದರ್ಶಿಸಿದ ದೊಡ್ಡ ಮನುಷ್ಯರಲ್ಲಿ ಹಂಗೇರಿಯದ ಆರ್ಟಿಸ್ಟ್ ಆದ ಮಿಸ್ ಬ್ರುನರ್ ಅವರು ರಾಜಕುಮಾರರ ಹಸ್ತವನ್ನು ನೋಡಿ, ಇವರು ಮುಂದೆ ಇಂಡಿಯದಲ್ಲಿ ಹೆಚ್ಚು

---

* ೧೯೧೪ರಲ್ಲಿ ಪ್ರಾರಂಭವಾದ ಬ್ರಿಟಿಷ್ ಜರ್ಮನರ ಯುದ್ಧವು, ೧೯೧೮ರಲ್ಲಿ ಮುಗಿದು, ಬ್ರಿಟಿಷರಿಗೆ ಜಯವಾಯಿತು. ಇದರ ಜ್ಞಾಪಕಾರ್ಥವಾಗಿ, ಶ್ರೀ ಚಾಮರಾಜ ಒಡೆಯರ ಹೆಸರಿನ ಮೊದಲು 'ಜಯ' ಎಂಬ ಪದವನ್ನು ಸೇರಿಸಿ, ಇವರಿಗೆ ಶ್ರೀ ಜಯಚಾಮರಾಜ ಒಡೆಯರೆಂದು ನಾಮಕರಣ ಮಾಡಿದ್ದಾರೆ.

ಪ್ರಶಸ್ತಿಯನ್ನು ಪಡೆಯುವರೆಂದೂ, ಇವರಿಂದ ಮೈಸೂರಿನಲ್ಲಿ ಮಹತ್ಕಾರ್ಯಗಳು ನಡೆಯುವುವೆಂದೂ ಭವಿಷ್ಯ ನುಡಿದರಂತೆ.

ಶ್ರೀ ಜಯಚಾಮರಾಜ ಒಡೆಯರವರು ಟೋಕಿಯೊ ಬಿಟ್ಟು ಹೊರಡುವುದಕ್ಕೆ ಮೊದಲು, ತಾವು ಬೀಡಾರ ಮಾಡಿದ್ದ ಹೊಟೇಲಿನಲ್ಲಿ ಸತ್ಕಾರಕೂಟವನ್ನೇರ್ಪಡಿಸಿ, ಇಲ್ಲಿಯ ಕೆಲವು ದೊಡ್ಡಮನುಷ್ಯರನ್ನೂ, ಮೈಸೂರಿನ ವಿದ್ಯಾರ್ಥಿಗಳನ್ನೂ ಆಹ್ವಾನಿಸಿ, ಸಂತೋಷಪಡಿಸಿದರು. ಇವರು ೧೯೩೭ನೆಯ ಜೂನ್ ೧೬ನೆಯ ತಾರೀಖು ಟೋಕಿಯೊವನ್ನು ಬಿಟ್ಟು, ಇಂಡಿಯ ದೇಶಕ್ಕೆ ಪ್ರಯಾಣಮಾಡಿ, ಜುಲೈ ತಿಂಗಳಲ್ಲಿ ಮೈಸೂರಿಗೆ ಬಂದು ಸೇರಿದರು.

ಶ್ರೀ ಜಯಚಾಮರಾಜ ಒಡೆಯರವರಿಗೆ ೧೯೩೮ನೆಯ ಮೇ ತಿಂಗಳು ೧೫ನೆಯ ತಾರೀಖಿನ ದಿನ ಶ್ರೀಮತಿ ಸತ್ಯಪ್ರೇಮ ಕುಮಾರೀ ದೇವಿಯವರನ್ನು ತಂದುಕೊಂಡು ಆಳುವ ಮಹಾಸ್ವಾಮಿಯವರ ಸಮ್ಮುಖದಲ್ಲಿ ವಿವಾಹಮಹೋತ್ಸವವು ಅರಮನೆಯಲ್ಲಿ ಸಮಸ್ತರಾಜವೈಭವಗಳೊಡನೆ ನಡೆಯಿತು. ಚಿರಂಜೀವಿ ಸೌಭಾಗ್ಯವತಿ ಸತ್ಯಪ್ರೇಮ ಕುಮಾರಿ ದೇವಿಯವರು ಹಿಂದುಸ್ಥಾನದ ಮಧ್ಯಪ್ರಾಂತದಲ್ಲಿರುವ ಚರಖಾರಿ ಸಂಸ್ಥಾನದ ಮಹಾರಾಜರವರಾದ ಮಹಾರಾಜಧಿರಾಜ ಶಿಫಾದಾರ್ ಉಲ್ ಮುಲ್ಕ್ ಅರಿಮರ್ದನಸಿಂಗ್ ಜುದೇವ ಬಹದ್ದೂರವರ ಸಹೋದರಿಯವರು. ಈ ಮಹೋತ್ಸವಕ್ಕೆ ಬಿಕಾನೀರ್ ಮಹಾರಾಜರವರು, ಹೈದರಾಬಾದಿನ ರಾಜಕುಮಾರರು, ಜಿಗಣಿ ರಾಜರು, ಇತರ ಸಂಸ್ಥಾನಗಳ ಪ್ರತಿನಿಧಿಗಳು ಮೊದಲಾಗಿ ಹೊರಗಿನವರು ಅನೇಕರು ದಯೆಮಾಡಿಸಿದ್ದರು.

ಈ ವಿವಾಹವಾದ ತರುವಾಯ ಶ್ರೀ ಜಯಚಾಮರಾಜ ಒಡೆಯರವರಿಗೆ ರಾಜಕೀಯ ವಿಚಾರಗಳಲ್ಲಿ ಪರಿಶ್ರಮಮಾಡಿಕೊಡುವುದಕ್ಕೂ, ಒಡನಾಡಿಯಾಗಿರುವುದಕ್ಕೂ, ಮದರಾಸು ಗವರ್ನರವರ ಖಾಸಗಿ ಕಾರ್ಯದರ್ಶಿಗಳಾದ ಶ್ರೀಯುತ ಡಿ. ಎಚ್. ಎಲ್ವಿನ್ ಅವರನ್ನು ನೇಮಿಸಿರುವರು.

ಶ್ರೀ ಜಯಚಾಮರಾಜ ಒಡೆಯರವರು ಮರಿಗಳ (ಕಬ್ಸ್) ಗುಂಪಿನ ಒಡೆಯರು. ಇವರು ಬಹಳ ಮೃದು ಸ್ವಭಾವದವರು. ಮಾತಾ ಪಿತೃಗಳಲ್ಲಿ ಇವರಿಗಿರುವ ಭಕ್ತಿಯು ಅಸಾಧಾರಣವಾದುದು. ಇವರು ಮೈಸೂರು ದೇಶದ ಯುವಕರೆಲ್ಲರಿಗೂ ಆದರ್ಶಪ್ರಾಯರಾಗಿದ್ದಾರೆ.

ಈ ನೂತನ ರಾಜ ದಂಪತಿಗಳಿಗೂ, ಶ್ರೀಮದ್ಯುವರಾಜರವರಿಗೂ, ಅವರ ಧರ್ಮಪತ್ನಿಯವರಿಗೂ ಭಗವಂತನೂ ಸರ್ವ ಮಂಗಳವನ್ನು ದಯೆಪಾಲಿಸಲಿ.

# ೧೭. ಮೈಸೂರಿನ ಪ್ರಶಂಸೆ ಮತ್ತು ಉಪಸಂಹಾರ

ಶ್ರೀಮನ್ಮಹಾರಾಜರವರಿಗೆ ೧೯೦೨ರಲ್ಲಿ ರಾಜ್ಯದಾಡಳಿತವನ್ನು ವಹಿಸಿಕೊಟ್ಟ ತರುವಾಯ, ೧೯೦೬ರಲ್ಲಿ ಆಗಿನ ಪ್ರಿನ್ಸ್ ಆಫ್ ವೇಲ್ಸ್‌ರವರಾದ ಐದನೆಯ ಜಾರ್ಜ್ ಪ್ರಭುಗಳೂ, ೧೯೦೯ರಲ್ಲಿ ವೈಸರಾಯರಾದ ಲಾರ್ಡ್ ಮಿಂಟೋ ಅವರೂ, ೧೯೧೩ರಲ್ಲಿ ಲಾರ್ಡ್ ಹಾರ್ಡಿಂಗ್ ಅವರೂ, ೧೯೧೯ರಲ್ಲಿ ಲಾರ್ಡ್ ಷೆಲ್ಮ್ಸ್‌ಫರ್ಡ್ ಅವರೂ, ೧೯೨೨ರಲ್ಲಿ ಐದನೆಯ ಜಾರ್ಜ್ ಪ್ರಭುವರ್ಯರ ಜ್ಯೇಷ್ಠಪುತ್ರರಾದ ಪ್ರಿನ್ಸ್ ಆಫ್ ವೇಲ್ಸ್ ಅವರೂ, ೧೯೨೩ರಲ್ಲಿ ಲಾರ್ಡ್ ರೆಡಿಂಗ್ ಅವರೂ, ೧೯೨೭ರಲ್ಲಿ ಲಾರ್ಡ್ ಅರ್ವಿನ್ ಅವರೂ, ೧೯೩೩ರಲ್ಲಿ ಲಾರ್ಡ್ ವಿಲಿಂಗ್‌ಡನ್ ಅವರೂ, ಮೈಸೂರು ಸಂಸ್ಥಾನಕ್ಕೆದಯೆಮಾಡಿಸಿ, ಆಳುವ ಮಹಾಸ್ವಾಮಿಯವರ ಆತಿಥ್ಯವನ್ನು ಸ್ವೀಕರಿಸಿ, ಇವರ ಅದ್ವಿತೀಯವಾದ ರಾಜ್ಯಭಾರದ ವಿಚಾರದಲ್ಲಿ ಒಬ್ಬರಿಗಿಂತ ಒಬ್ಬರು ಅತಿಶಯವಾಗಿ ಹೊಗಳಿ, ತಮ್ಮ ಮೆಚ್ಚುಗೆಯನ್ನು ತೋರ್ಪಡಿಸಿರುವರು.

ಲಂಡನ್ನಿನಲ್ಲಿ ೧೯೩೨ನೆಯ ಇಸವಿ ಡಿಸೆಂಬರ್ ಕಡೆಯ ಭಾಗದಲ್ಲಿ ನಡೆದ ತೃತೀಯ ಚಕ್ರಗೋಷ್ಠಿಯ ಪರಿಸಮಾಪ್ತಿಯಾಗುವ ಕಾಲದಲ್ಲಿ ಲಾರ್ಡ್ ಸ್ಯಾಂಕೆಯವರು ಬ್ರಿಟಿಷ್ ಚಕ್ರಾಧಿಪತ್ಯದ ಪ್ರತಿನಿಧಿಯಾಗಿ ಮಾತನಾಡುತ್ತಾ, "ವಿಚಕ್ಷಣೆಯಿಂದಲೂ, ನ್ಯಾಯಸಮ್ಮತವಾಗಿಯೂ, ರಾಜ್ಯಭಾರ ನಡೆಯುವ ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವು ಭರತವರ್ಷಕ್ಕೆ ಮಾತ್ರವಲ್ಲ ; ಪ್ರಪಂಚಕ್ಕೇ ಮಾದರಿಯಾಗಿದೆ," ಎಂದರು.

೧೯೩೩ನೆಯ ಇಸವಿ ಸೆಪ್ಟಂಬರ್ ತಿಂಗಳಲ್ಲಿ ನಡೆದ ದೇವನಹಳ್ಳಿ ದೀಪಾರಂಭ ಮಹೋತ್ಸವವನ್ನು ನೆರವೇರಿಸಲು ನಮ್ಮ ದಿವಾನರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಕೊಚ್ಚಿನ್ ಸಂಸ್ಥಾನದ ಮಹಾರಾಜರವರಾದ ಸರ್ ಶ್ರೀ ರಾಮವರ್ಮರವರೊಂದಿಗೆ ದೇವನಹಳ್ಳಿಗೆ ದಯೆಮಾಡಿಸಿದರು. ಅಲ್ಲಿ ದಿವಾನರವರ ಪ್ರಾರ್ಥನೆಯ ಮೇರೆಗೆ ಕೊಚ್ಚಿನ್ ಮಹಾರಾಜರವರು ತಮ್ಮ ಅಮೃತಹಸ್ತದಿಂದ ದೀಪಾರಂಭವನ್ನು ಮಾಡಿ, ಸಭಾಸದರನ್ನು ಕುರಿತು, "ನೀವೆಲ್ಲಾ ಧನ್ಯಪ್ರಜೆಗಳು. ನಿಮ್ಮ ಮಹಾರಾಜರು ಶ್ರೀ ಮಹಾವಿಷ್ಣು ಸಮಾನರು," ಎಂದರು.

ಆಳುವ ಮಹಾಸ್ವಾಮಿಯವರ ವಿಚಾರದಲ್ಲಿಯೂ, ಮೈಸೂರು ದೇಶದ ಮತ್ತು ಮೈಸೂರು ಪ್ರಜೆಗಳ ವಿಚಾರದಲ್ಲಿಯೂ, ಶ್ರೀಯುತ ಪಂಡಿತ ಮದನ ಮೋಹನ ಮಾಳವೀಯರು, "ಮೈಸೂರಿನ ಪ್ರಜೆಗಳೇ, ನಿಮ್ಮದೇ ಭಾಗ್ಯ! ಎಂತಹ ಅಂದವಾದ ನಾಡು ನಿಮ್ಮದು. ಸಮುದ್ರ ಮಟ್ಟಕ್ಕೆ ಎರಡು ಮೂರು ಸಾವಿರ ಅಡಿಯ ಮೇಲಿದೆ. ಅಷ್ಟು ಚಳಿಯೂ ಇಲ್ಲ, ಅಷ್ಟು ಸೆಕೆಯೂ ಇಲ್ಲ. ಆರೋಗ್ಯಕರವಾದ, ಆಹ್ಲಾದಕರವಾದ ವಾಯುಗುಣ. ಮಿತಿಯಿಲ್ಲದ ಪ್ರಕೃತಿ ಸೌಭಾಗ್ಯ! ಇದರ ಜೊತೆಗೆ ಶ್ರೀ ಕೃಷ್ಣರಾಜ ಒಡೆಯರನ್ನು ಮಹಾರಾಜರನ್ನಾಗಿ ಪಡೆದಿರುವಿರಿ. ಇದಕ್ಕಿಂತಲೂ ಪರಮಭಾಗ್ಯವಿನ್ನಾವುದುಂಟು? ಮಹಾರಾಜರ ಪರಿಶುದ್ಧವಾದ ಅಂತರಂಗಜೀವನ, ಅದರೊಂದಿಗೆ ತಮ್ಮ ಪ್ರಜೆಗಳಲ್ಲಿ ಅವರಿಗಿರುವ ಹಿತಚಿಂತನೆ, ಹಿರಿಯರಿಟ್ಟ ಹೆಜ್ಜೆಯಲ್ಲಿಯೇ ಹೆಜ್ಜೆಯಿಟ್ಟು ನಡೆಯುವುದರಲ್ಲಿ

ಅವರಿಗಿರುವ ಅನನ್ಯಸಾಧಾರಣವಾದ ಭಕ್ತಿ ಮತ್ತು ತಮ್ಮ ನಂಬುಗೆಯೊಳಗವರಿಗಿರುವ ದೃಢವಾದ ಶ್ರದ್ಧೆ; ಅದರೊಂದಿಗೆ ಆಧುನಿಕ ಪ್ರಗತಿಗೆ ಅತ್ಯಗತ್ಯವಾದ ಸಾಧನಗಳ ಬೆಲೆಯನ್ನು ಕಟ್ಟುವುದರಲ್ಲಿ ಅವರಿಗಿರುವ ಬುದ್ಧಿ ಚಾತುರ್ಯ ಮತ್ತು ವೈಯ್ಯಾರವಿಲ್ಲದ, ನಿಷ್ಕಪಟವಾದ ಪರಮತ ಸಹಿಷ್ಣುತೆ, ಈ ಗುಣವಿಶೇಷಗಳಿಂದ ಮೈಸೂರಿನ ಶ್ರೀಮನ್ಮಹಾರಾಜರವರು ನರಪತಿಗಳಲ್ಲೆಲ್ಲಾ ಶ್ರೇಷ್ಠರೆನಿಸಿರುವರು. ಅಷ್ಟುಮಾತ್ರವಲ್ಲ; ಸರ್ವರ ತ್ರಿಕರಣಪೂರ್ವಕವಾದ ಗೌರವಕ್ಕೂ ಪಾತ್ರರಾಗಿರುವರು," ಎಂದು ಹೇಳಿದರು.

ಮೈಸೂರು ಸಂಸ್ಥಾನದಲ್ಲಿ ಕೆಲವು ದಿನಗಳಿದ್ದು ಸಂಸ್ಥಾನದ ಮುಖ್ಯ ಭಾಗಗಳನ್ನೆಲ್ಲಾ ನೋಡಿದ ಸರ್ ಪುರುಷೋತ್ತಮದಾಸ್ ಥಾಕೂರ್‌ದಾಸ್ ಅವರು ಮೈಸೂರು ಸರ್ವತೋಮುಖವಾಗಿ ಮುಂದುವರಿದಿದೆ ಎಂದು ಹೇಳಿ, ಇಂಡಿಯ ದೇಶಕ್ಕೆ ತಾಜಮಹಲ್ ಹೇಗೆ ರತ್ನಪ್ರಾಯವಾಗಿರುವುದೋ ಹಾಗೇ ಮೈಸೂರಿಗೆ 'ಬೃಂದಾವನ' ವಿರುವುದೆಂದು ನುಡಿದು, ಶ್ರೀಮನ್ಮಹಾರಾಜರವರ ಆಳ್ವಿಕೆಯನ್ನು ಬಹಳವಾಗಿ ಕೊಂಡಾಡಿದರು.

ಆಂಧ್ರ ಮಹಾಪುರುಷರಲ್ಲೊಬ್ಬರೂ ಅಲಹಾಬಾದ್ 'ಲೀಡರ್' ಪತ್ರಿಕೆಯ ಸಂಪಾದಕರೂ ಆದ ಶ್ರೀಯುತ ಚಿತ್ತಾವೂರು ಯಜ್ಞದತ್ತ ಚಿಂತಾಮಣಿಯವರು (ಸಿ.ವೈ.ಚಿಂತಾಮಣಿ) ೧೯೩೫ನೆಯ ಅಕ್ಟೋಬರು ೮ನೆಯ ತಾರೀಖು ಪ್ರಾತಃಕಾಲ ಮೈಸೂರು ವೃತ್ತ ಪತ್ರಿಕೋದ್ಯೋಗಿಗಳ ಸಂಘದ ಪ್ರಥಮ ವಾರ್ಷಿಕೋತ್ಸವ ಸಮಾರಂಭದಲ್ಲಿ ಅಧ್ಯಕ್ಷತೆಯನ್ನು ವಹಿಸಿ ಮಾಡಿದ ಭಾಷಣದಲ್ಲಿ, "ಮೈಸೂರು ಮಾದರಿ ರಾಜ್ಯ. ಅಲ್ಲಿನ ಪ್ರಭುಗಳು ಪ್ರಜಾವತ್ಸಲರು. ಅವರ ಧರ್ಮಪ್ರಭುತ್ವದಲ್ಲಿ ಮೈಸೂರಿಗೆ ಭರತಖಂಡದಲ್ಲಿಯೇ ಅಲ್ಲ, ವಿಶ್ವದಲ್ಲಿಯೇ ಗೌರವ ದೊರೆತಿದೆ. ಅಂತಹ ಮಹಾಪ್ರಭುಗಳು ಕೆಲವು ದಿನಗಳ ಹಿಂದೆ ಅನಾರೋಗ್ಯದಿಂದ ನರಳುತ್ತಿದ್ದರು. ಈಗ ಪೂರ್ಣ ಆರೋಗ್ಯ ಹೊಂದಿರುವುದು ಮೈಸೂರು ಪ್ರಜೆಗಳ ಪುಣ್ಯ. ನಿನ್ನೆ (೭-೧೦-೩೫) ನಡೆದ (ವಿಜಯದಶಮಿ) ಮಹೋತ್ಸವವನ್ನು ಪ್ರತ್ಯಕ್ಷವಾಗಿ ಕಂಡು ನಾನು ಮೈಸೂರು ಪ್ರಭುಗಳು ಪ್ರಜಾನುರಾಗವನ್ನು ಹೇಗೆ ಸಂಪಾದಿಸಿರುವರೆಂಬುದನ್ನು ಯೋಚಿಸಿದಿರಲಾರೆನು," ಎಂದು ಹೇಳಿದರು.

ಫೆಡರೇಷನ್ ಆಫ್ ಇಂಡಿಯನ್ ಛೇಂಬರ್ಸ್ ಆಫ್ ಕಾಮರ್ಸ್ ಅಧ್ಯಕ್ಷರಾದ ಸರ್ ರಹಿಮತುಲ್ಲ ಚಿನ್ನೈ ಅವರು ೧೯೩೭ನೆಯ ಜುಲೈ ೧೧ನೆಯ ತಾರೀಖು ಸಂಜೆ ಮೈಸೂರು ವಾಣಿಜ್ಯ ಭವನದಲ್ಲಿ ಏರ್ಪಾಡಾಗಿದ್ದ ಸತ್ಕಾರಕೂಟದಲ್ಲಿ ಭಾಗವಹಿಸಿ ಮಾಡಿದ ಭಾಷಣದಲ್ಲಿ, "ಜನಪದದ ಆರ್ಥಿಕೋನ್ನತಿಗೆ ದೇಶವು ಕೈಗಾರಿಕೆಯಲ್ಲಿ ಮುಂದುವರಿಯ ಬೇಕೆಂಬ ತತ್ತ್ವವನ್ನು ಗ್ರಹಿಸಿ, ಅದನ್ನು ಆಚರಣೆಗೆ ತಂದಿರುವ ಪ್ರಗತಿಪರ ದೇಶೀಯ ಸಂಸ್ಥಾನಗಳಲ್ಲಿ ಮೈಸೂರು ಒಂದಾಗಿದೆ. ಇದಕ್ಕೆಲ್ಲ ಸಹಾನುಭೂತಿಯುತರೂ, ಪ್ರಗತಿ ಗಾಮಿಗಳೂ ಆದ ಶ್ರೀಮನ್ಮಹಾರಾಜರವರೇ ಕಾರ್ಯಕರ್ತರು. ಪ್ರಜೆಗಳು ಸರ್ವತೋ ಮುಖವಾಗಿ ಮುಂದುವರಿಯಬೇಕೆಂಬುದೇ ಶ್ರೀಮನ್ಮಹಾರಾಜರವರ ಆಕಾಂಕ್ಷೆ. ಅಂತಹ ಆದರ್ಶ ಪ್ರಭುಗಳಿಗೆ ಅವರ ಇಂಗಿತವನ್ನು ಚೆನ್ನಾಗಿ ಅರಿತು ಅವನ್ನು ಈಡೇರಿಸುವುದಕ್ಕಾಗಿ ಕೆಲಸಮಾಡುವುದಕ್ಕೆ ಸಮರ್ಥರಾದ ದಿವಾನರು ದೊರೆತಿರುವುದು ಅದೃಷ್ಟವೇ ಸರಿ," ಎಂದು ಪ್ರಶಂಸಿಸಿದರು.

ಆಳುವ ಮಹಾಸ್ವಾಮಿಯವರ ೫೫ನೆಯ ವರ್ಧಂತ್ಯುತ್ಸವದ ಸಂಬಂಧವಾಗಿ ೮-೬-೩೮ರಲ್ಲಿ ಲಂಡನ್ ನಗರದ ಡಾರ್ಚೆಸ್ಟರ್ ಹೊಟೇಲಿನಲ್ಲಿ ನಡೆದ ಔತಣಕೂಟದಲ್ಲಿ ಶ್ರೀಮನ್ಮಹಾರಾಜರವರಿಗೆ ಆರೋಗ್ಯಾತಿಶಯಗಳನ್ನು ಬಯಸಿ ಮಾರ್ಕ್ವಿಸ್ ಲೋಥಿಯನ್ ಅವರು ಭಾಷಣಮಾಡುತ್ತಾ, ಮೈಸೂರು ಮಾದರಿ ಸಂಸ್ಥಾನವೆಂದು ಹೇಳುವುದನ್ನು ತಾವು ಖಂಡಿತವಾಗಿಯೂ ಒಪ್ಪುವರೆಂದೂ, ಚರ್ಚೆಯಲ್ಲಿ ಸರ್ ಮಿರ್ಜಾರವರಿಗಿರುವ ಸಾಮರ್ಥ್ಯವನ್ನೂ, ಆಲೋಚನೆ ಹೇಳುವುದರಲ್ಲಿ ಅವರಿಗಿರುವ ವಿವೇಕವನ್ನೂ, ಭರತಖಂಡಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿಯೂ, ರಾಜಕೀಯ ಸಂಬಂಧವಾದ ವಿಷಯಗಳಲ್ಲಿ ನಡೆಯಬೇಕಾದ ಕ್ರಮಗಳ ವಿಚಾರಗಳಲ್ಲಿಯೂ ಅವರಿಗಿರುವ ತಿಳಿವಳಿಕೆಯನ್ನೂ ತಾವು ಬಲ್ಲವರಾಗಿದ್ದರೂ, ಆಡಳಿತವನ್ನು ನಿರ್ವಹಿಸುವುದರಲ್ಲಿ ಅವರ ಶಕ್ತಿಸಾಮರ್ಥ್ಯಗಳು ವಿಸ್ಮಯಕರವಾಗಿವೆಯೆಂಬುದು ಮಾತ್ರ, ಮೈಸೂರು ಸಂಸ್ಥಾನಕ್ಕೆ ಹೋಗಿ ಪ್ರತ್ಯಕ್ಷವಾಗಿ ನೋಡುವವರೆಗೂ ತಮಗೆ ತಿಳಿದಿರಲಿಲ್ಲವೆಂದು ಹೇಳಿದರು. ಅವರು ತಮ್ಮ ಭಾಷಣವನ್ನು ಮುಂದುವರಿಸುತ್ತಾ, ಸರ್ ಮಿರ್ಜಾ ಇಸ್ಮಾಯಿಲ್ ಅವರೂ, ಅವರ ಸಹೋದ್ಯೋಗಿಗಳೂ, ಮೈಸೂರು ಸಂಸ್ಥಾನದಲ್ಲಿ ಕೈಗಾರಿಕೆಗಳ ಮೇಲೆ ಕೈಗಾರಿಕೆಗಳಿಗೆ ಒತ್ತಾಸೆಕೊಟ್ಟು ನಡೆಯಿಸಿಕೊಂಡು ಬಂದಿರುವರೆಂದೂ, ನಗರಾಭಿವೃದ್ಧಿಯ ರೀತಿ ರಚನೆಗಳೂ ಶೃಂಗಾರವೂ ಭರತಖಂಡದಲ್ಲಾಗಲಿ ಅಥವಾ ಇಂಗ್ಲೆಂಡಿನಲ್ಲಾಗಲಿ ತಾವು ಇತರ ಸ್ಥಳಗಳಲ್ಲಿ ಕಂಡಿರುವಷ್ಟೇ ಉತ್ತಮವಾಗಿವೆ, ಅಥವಾ ಇನ್ನೂ ಉತ್ತಮವಾಗಿವೆಯೆಂದೇ ಹೇಳಿದರೂ ಹೇಳಬಹುದೆಂದೂ, ವಿಹಾರ ಸ್ಥಾನವನ್ನು ಹೇಗೆ ಏರ್ಪಡಿಸಿ ಹೇಗೆ ನಡೆಯಿಸಿಕೊಂಡು ಬರಬೇಕೆಂಬ ವಿಚಾರದಲ್ಲಿ ಮೈಸೂರು ಸಂಸ್ಥಾನದವರು 'ಬೃಂದಾವನ' ಮುಂತಾದುವುಗಳ ಮೂಲಕ ಪ್ರಪಂಚಕ್ಕೇ ಮಾದರಿಯನ್ನು ತೋರಿಸಿದ್ದಾರೆಂದೂ ತಿಳಿಯಪಡಿಸಿದರು. ಇಷ್ಟೇ ಅಲ್ಲದೆ, 'ಬೃಂದಾವನ'ದ ಉದ್ಯಾನವೂ, ಜಲಾಧಾರಾಯಂತ್ರ ಸಾಧನಗಳೂ ಪ್ರಪಂಚದಲ್ಲಿಯೇ ಅತ್ಯಂತ ಸುಂದರವಾಗಿಯೂ ಮತ್ತು ಚಿತ್ತಾಕರ್ಷಕವಾಗಿಯೂ ಇವೆಯೆಂದೂ, 'ಮಾದರಿ ಸಂಸ್ಥಾನ'ವೆಂಬ ಹೆಸರನ್ನು ಪಡೆಯಲು ಮೈಸೂರು ಸಂಸ್ಥಾನಕ್ಕೆ ನಿಜವಾಗಿಯೂ ಅರ್ಹತೆಯುಂಟೆಂದೂ, ಭರತಖಂಡದ ಸಂಸ್ಥಾನಗಳಲ್ಲೊಂದಾದ ಮೈಸೂರು ಸಂಸ್ಥಾನದಲ್ಲಿ ಶ್ರೀಮನ್ಮಹಾರಾಜರವರ ನೇತೃತ್ವದಲ್ಲಿ ಅಸಾಧಾರಣ ಸಾಮಾರ್ಥ್ಯವುಳ್ಳ ದಿವಾನರವರ ವಿಚಕ್ಷಣೆಯ ಆಡಳಿತದಲ್ಲಿ ಏನೇನು ನಡೆಯುತ್ತಿದೆ ಯೆಂಬುದನ್ನು ನೋಡಿದುದೇ ತಮ್ಮದೊಂದು ಸುಯೋಗವೆಂದೂ ಪ್ರಶಂಸಿಸಿದರು.

ಇಷ್ಟೇಅಲ್ಲದೆ ಮೈಸೂರು ದೇಶವು ರಾಜಮಹಾರಾಜರುಗಳ ಪಾಠಶಾಲೆಯಾಗುತ್ತಿದೆ. ಇಲ್ಲಿಗೆ ಇತರ ಆಶ್ರಿತ ಸಂಸ್ಥಾನಗಳ ರಾಜರುಗಳು ಬಾಲ್ಯದಲ್ಲಿ ತಕ್ಕ ಶಿಕ್ಷಣವನ್ನು ಪಡೆದು, ಮಾದರಿ ಸಂಸ್ಥಾನವಾದ ಮೈಸೂರಿನಲ್ಲಿ ರಾಜ್ಯಭಾರವು ಎಷ್ಟೊಂದು ವಿಚಕ್ಷಣೆಯಿಂದ ನಿರ್ವಹಿಸಲ್ಪಡುತ್ತಿದೆ ಎಂಬುದನ್ನೂ, ಒಂದೊಂದು ಇಲಾಖೆಯಲ್ಲಿಯೂ ಕೆಲಸಗಳು ಎಷ್ಟೊಂದು ಹುರುಪಿನಿಂದ ನಡೆಯುತ್ತಿವೆ ಎಂಬುದನ್ನೂ ಕಣ್ಣಾರಕಂಡು, ತಮ್ಮ ರಾಜ್ಯದಾಢಳಿತಗಳನ್ನು ಕ್ರಮಪಡಿಸಿಕೊಳ್ಳುವುದಕ್ಕಾಗಿ ಈಚೆಗೆ ಬಹುಮಂದಿ ಬರುತ್ತಿರುವುದು ಮೈಸೂರಿನವರಿಗೆ ಹೆಮ್ಮೆಯ ಸಂಗತಿಯಾಗಿದೆ. ಹೀಗೆ ಬಂದ ಸಂಸ್ಥಾನಾಧೀಶ್ವರರಲ್ಲಿ

ಅಕ್ಕಲಕೋಟೆ ರಾಜರೂ, ಬನ್ನೀರಾ ರಾಜರೂ, ನಾಗೋಡುರಾಜರೂ, ಜಂಜೀರ ನವಾಬರೂ, ನರಸಿಂಘರ್‌ರಾಜರೂ, ಗ್ವಾಲಿಯರ್ ಮಹಾರಾಜರವರೂ, ಖೈರ್‌ಪುರದ ಮೀರ್‌ರವರೂ, ತಿರುವಾಂಕೂರು ಮಹಾರಾಜರೂ, ಅಂಬಿಕಾಪುರದ ಮಹಾರಾಜ ಕುಮಾರರೂ, ಸರಗೋಜ ರಾಜರೂ ಕೆಲವರು. ಇವರೆಲ್ಲರೂ ಶಿಕ್ಷಣವು ಪೂರೈಸಿ, ಈ ಸಂಸ್ಥಾನವನ್ನು ಬಿಟ್ಟು ಹೋಗುವಾಗ್ಗೆ ಮೈಸೂರನ್ನೂ ಶ್ರೀಮನ್ಮಹಾರಾಜರವರನ್ನೂ ಬಹುವಾಗಿ ಕೊಂಡಾಡಿರುವರು.

ಇಂತಹ ಗುಣವಂತರೂ, ಪ್ರಜಾಭಿಮಾನಿಗಳೂ ಆದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರಿಗೂ, ಇವರ ಧರ್ಮಪತ್ನಿಯವರಿಗೂ, ಶ್ರೀಮದ್ಯುವರಾಜರವರಿಗೂ, ಇವರ ಪುತ್ರರಾದ ಶ್ರೀ ಜಯಚಾಮರಾಜ ಒಡೆಯರವರಿಗೂ, ಸಮಸ್ತ ರಾಜಬಂಧು ವರ್ಗದವರಿಗೂ, ಆಯುರಾರೋಗ್ಯ ಐಶ್ವರ್ಯಗಳನ್ನು ಭಗವಂತನು ಕೊಟ್ಟು ಸಲಹುವುದಲ್ಲದೆ, ಆಳುವ ಮಹಾಸ್ವಾಮಿಯವರ ರಾಜ್ಯಭಾರದ **'ಸುವರ್ಣ ಮಹೋತ್ಸವ,' 'ರತ್ನ ಮಹೋತ್ಸವ,'** ಮೊದಲಾದುವು ನಡೆದು, ನಾವೂ ಈ ಉತ್ಸವಾನಂದದಲ್ಲಿ ಭಾಗಿಗಳಾಗುವಂತೆ ಅನುಗ್ರಹಿಸಬೇಕೆಂದು ದಯಾಮಯನೂ, ಸರ್ವಶಕ್ತನೂ ಆದ ಭಗವಂತನನ್ನು ಸರ್ವದಾ ನಾವೆಲ್ಲರೂ ಪ್ರಾರ್ಥಿಸೋಣ.

**ಭದ್ರಂ ಶುಭಂ ಮಂಗಳಂ**

## APPRECIATIONS

**B. M. Srikantia Esq.,** M.A., B.L., Professor of English Central College, Bangalore, writes:-

I have read with pleasure Mr. Swami Rao's manuscript, giving a clear and concentrated account of the life and reign of. His Highness the Maharaja of Mysore. The writer has carefully followed the vigorous and progressive policies pursued, under the benignant rule of His Highness, by the various administrations in succession, under eminent Dewans and brings the histor up to date, including the Dewanship of Sir Mirza Ismail, culminating in moral and material advancement in all directions and the readiness to shoulder heavier responsibilities in the great experiment of the Indian Federation. His Highness's personality and keen interest in his subjects' welfare and distinguishing traits of character have been worthily sketched. Extracts from speeches of eminent men, His Highness, the Viceroys who have visited the State and the Dewans, have been happily selected to illustrate policies, ideals and personal character. The language is chaste and elegant and well within the comprehension of the general reader. Without prohxity, in bold outline, a pleasing picture of the march of Mysore is presented and I wish to congratulate Mr. Swami Rao on his excellent performance.



**E. N. Natesan Esq.,** B. A., Survey of India, Malleswaram, Bangalore, writes:-

in the increasing Kannada literature, due to the great renaissance of recent days, there have been comparatively few biographical attempts. Mr. L. Swami Rao, the well-known scholar and educationalist. has supplied the real need by bringing out a complete, authenticated and magnificent biography of the great Maker of Modern Mysore.

Through the courtesy of Mr. Swami Rao, I have had the privilege of reading a number of chapters including the admirable one on `` Bangalore Bhagya" and on the great personality, who was largely instrumental in shaping the destinies of Mysore for a number of years, in the person of Sri VANi VILASA SANNIDHANA, the gifted mother of the Gifted Son, His Highness the Maharaja of Mysore.

I congratulate Mr. L. Swami Rao on the very high standard and tone of his writings and i feel sure the book will prove of the greatest value to all the citizens of Mysore, especially the student population, who will have before them the glorious example of their Sovereign Ruler, whose personal life and example will ever serve as a beacon light in their career

Mr. Swami Rao's mention of the great prime Ministers including the Great Statesman Sri Mirza Ismail, who have served the state so loyally and remarkably is really magnificent.

The book is full of interest from start to finish.





ದರಿಯಾದೌಲತ್ ಬಾಗ್

ಟಿಪ್ಪು ಸುಲ್ತಾನರು ಬೇಸಿಗೆಯಲ್ಲಿ ವಾಸಮಾಡುವುದಕ್ಕಾಗಿ ೧೭೮೪ರಲ್ಲಿ ಕಟ್ಟಿಸಿದ ಅರಮನೆ



ವಿದ್ಯುದ್ದೀಪಗಳಿಂದ ಕಂಗೊಳಿಸುತ್ತಿರುವ ಮೈಸೂರು ಅರಮನೆ



ವಿಜಯದಶಮಿಯ ದಿನ ಆಳುವ ಮಹಾಸ್ವಾಮಿಯವರ ಮೆರವಣಿಗೆ



ಸಿಲ್ವರ್ ಜ್ಯೂಬಿಲಿ ಕ್ಲಾಕ್ ಟವರ್, ಮೈಸೂರು
(ಶ್ರೀಮನ್ಮಹಾರಾಜರವರ ರಜತಮಹೋತ್ಸವದ ಸವಿ ನೆನಪಿಗಾಗಿ
ಅರಮನೆಯ ಅಧಿಕಾರಿಗಳಿಂದ ನಿರ್ಮಿಸಲ್ಪಟ್ಟುದು)



ಮಹಾಸ್ವಾಮಿಯವರು ಆಲ್ಮೋರಾದಿಂದ ಪ್ರಯಾಣವನ್ನು ಬೆಳೆಯಿಸಿದುದು





ಬಾರ್ಖಾ ಮೈದಾನದಿಂದ ಕಾಣುವ ಕೈಲಾಸ ಶಿಖರ



ಡಾ. ಸರ್. ಕೆ.ವಿ. ಪುಟ್ಟಣ್ಣ ಶೆಟ್ಟರ ನಗರಭವನ




ವೃತ್ತಿಶಿಕ್ಷಣ ಕಲಾಶಾಲೆ, ಬೆಂಗಳೂರು (ರಜತಮಹೋತ್ಸವದ ಸ್ಮಾರಕ)



ಶ್ರೀ ವಾಣೀವಿಲಾಸ ಹೆರಿಗೆ ಆಸ್ಪತ್ರೆ, ಬೆಂಗಳೂರು



ದಿವಂಗತ ಐದನೆಯ ಜಾರ್ಜ್ ಪ್ರಭುಗಳವರು



ಮೇರಿ ರಾಣಿಯವರು



ಆರನೆಯ ಜಾರ್ಜ್ ಚಕ್ರವರ್ತಿಯವರು

ಎಲಿಜಬೆತ್ ರಾಣಿಯವರು



ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ.,
ಶ್ರೀಮದ್ಯುವರಾಜರವರು



ಆಳುವ ಮಹಾಸ್ವಾಮಿಯವರು ದಿವಾನ್ ಸಾಹೇಬರವರು



ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ.,
ಆಳುವ ಮಹಾಸ್ವಾಮಿಯವರು



ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಅವರು



ಮೈಸೂರು ದೊರೆಗಳ ಕುಲದೇವತೆಯಾದ
ಶ್ರೀ ಚಾಮುಂಡೇಶ್ವರಿ



ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ಮತ್ತು ದತ್ತು ಸ್ವೀಕಾರ



ಆಳಿದ ಮಹಾಸ್ವಾಮಿಯವರಾದ
ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ., ಅವರು



ಶ್ರೀಯುತ ರಂಗಾಚಾರ್ಲು ಅವರು



ಸರ್. ಕೆ. ಶೇಷಾದ್ರಿ ಅಯ್ಯರ್, ಕೆ.ಸಿ.ಎಸ್.ಐ., ಅವರು



ಕೃಷ್ಣರಾಜಸಾಗರ ಅಣೆಕಟ್ಟು



ಡಾ. ಸರ್. ಎಂ. ವಿಶ್ವೇಶ್ವರಯ್ಯ, ಕೆ.ಸಿ.ಐ.ಇ., ಅವರು



ಸೆಂಟ್ರಲ್ ಕಾಲೇಜು, ಬೆಂಗಳೂರು



ಮಹಾರಾಜಾ ಕಾಲೇಜು, ಮೈಸೂರು



ಆಳಿದ ಶ್ರೀ ಚಾಮರಾಜೇಂದ್ರ ಒಡೆಯರವರ ಪ್ರತಿಮೆಯಿರುವ
ಕಬ್ಬನ್‌ಪಾರ್ಕ್ ಉದ್ಯಾನವನ



ಬೆಂಗಳೂರಿನಲ್ಲಿರುವ 'ಲಾಲ್‌ಬಾಗ್'



ಕರ್ಜನ್ ಪಾರ್ಕ್, ಮೈಸೂರು



ಮೈಸೂರು ಸ್ಟ್ಯಾಚು ಸ್ಕ್ವೇರ್

'ಶುಭವಾಗಲಿ'

ಇಂಗ್ಲಿಷರು ೧೮೮೧ರಲ್ಲಿ ಮೈಸೂರು ಸಂಸ್ಥಾನದ
ರಾಜ್ಯಾಡಳಿತವನ್ನು ಶ್ರೀ ಚಾಮರಾಜೇಂದ್ರ ಒಡೆಯರ್
ಪ್ರಭುಗಳಿಗೆ ಹಿಂದಿರುಗಿಸಿದ ನಂತರ,
೧೯೦೨ರಲ್ಲಿ ಶ್ರೀಮನ್ಮಾಹಾರಾಜ ಕೃಷ್ಣರಾಜ ಒಡೆಯರ್
ಮಹಾಪ್ರಭುಗಳು ಈ ದೇಶದ
ರಾಜ್ಯಭಾರವನ್ನು ವಹಿಸಿಕೊಂಡರು.

ದೇಶ ವಿದೇಶಗಳ ಪರ್ಯಟನೆ ನಡೆಸಿ,
ಜನರ ಕಷ್ಟ ಸುಖಗಳನ್ನು ಖುದ್ದಾಗಿ ಅರಿತು,
ಅವರ ಸರ್ವತೋಮುಖ ಅಭಿವೃದ್ಧಿಗೆ ಕೈಗೊಳ್ಳಬೇಕಾದ
ಲೋಕೋಪಯೋಗಿ ಕಾರ್ಯಯೋಜನೆಗಳ
ನೀಲಿ ನಕಾಶೆಯನ್ನು ಸಿದ್ಧಪಡಿಸಿಕೊಂಡು
ತಮ್ಮ ಆಡಳಿತದ ಅವಧಿಯಲ್ಲಿ ಅವುಗಳ
ಕಾರ್ಯಾನುಷ್ಠಾನ ಮಾಡಿದ ಯಶೋಗಾಥೆ
ಈ ಕೃತಿಯಲ್ಲಿ ವಿವರಗೊಂಡಿದೆ.

ಗತವೈಭವ ಅರಿಯಲು ಈ ಕೃತಿಯನ್ನು
ಅಗತ್ಯವಾಗಿ ಓದಬೇಕಾದ ಅನಿವಾರ್ಯತೆ ಇದೆ.

ಧರ್ಮದರ್ಶಿ ಹರಿಕೃಷ್ಣ ಪುನರೂರು
ಅಧ್ಯಕ್ಷರು